# ಸಿದ್ಧಗಂಗಾ

(ತ್ರೈಮಾಸಿಕ)

ಸಂಚಿಕೆ ೨

೧೯೬೬



# ಈ ಸಂಚಿಕೆಯಲ್ಲಿ



## ವಿನಮ್ರ ಪ್ರಾರ್ಥನೆ

ಮಹಾಶಯರೇ,

"ಸಿದ್ಧಗಂಗಾ" ತ್ರೈಮಾಸಿಕದ ಆರ್ಥಿಕ ಪರಿಸ್ಥಿತಿಯನ್ನು ಸುಧಾರಿಸಿ ಪ್ರಥಮವರ್ಗದ ಪತ್ರಿಕೆಯನ್ನಾಗಿ ಮಾಡಲು ವಾಚಕವೃಂದದ ಹಾಗೂ ಜನತೆಯ ವಿಶೇಷ ಆರ್ಥಿಕ ನೆರವನ್ನು ಆಶಿಸಿದ್ದೇವೆ.

ಪತ್ರಿಕೋದ್ಯಮದ ಯಶಸ್ಸಿಗೆ ಸ್ವಂತ ಮುದ್ರಣಾಲಯ, ವಿಚಾರಪೂರಿತ ಲೇಖನಗಳೂ ಅತ್ಯಗತ್ಯ. ಇದಕ್ಕಾಗಿ ಈ ಕೆಳಕಂಡಂತೆ ಆರ್ಥಿಕ ಸಹಾಯವನ್ನು ತಮ್ಮಿಂದ ಬಯಸಿದ್ದೇವೆ.

1) 200 ರೂ. ಮೇಲೆ ನೀಡುವವರು—ಪೋಷಕರು
2) 150 ರೂ. ಕೊಡುವವರು — ಪ್ರೋತ್ಸಾಹಕರು
3) 100 ರೂ. ಕೊಡುವವರು — ಸಹಾಯಕರು
4) 51 ರೂ. ಕೊಡುವವರು — ಹಿತೈಷಿಗಳು

ಹೀಗೆ ಆದರಪೂರ್ವಕವಾಗಿ ಧನಸಹಾಯಮಾಡುವ ಮಹನೀಯರ ಹೆಸರುಗಳನ್ನು ಪತ್ರಿಕೆಯಲ್ಲಿ ಕೃತಜ್ಞತಾಪೂರ್ವಕವಾಗಿ ಸ್ಮರಿಸಿ ಪ್ರಕಟಿಸಲಾಗುವುದು.

ಪ್ರಪ್ರಥಮವಾಗಿ ತುಮಕೂರಿನ ಶ್ರೀ ಸಿದ್ಧಗಂಗಾ ಹೈಸ್ಕೂಲಿನ ಶಿಕ್ಷಕರೂ, ಉತ್ತಮ ಬರಹಗಾರರೂ ಆದ ಶ್ರೀ ಬಿ. ಎಸ್. ಮಂಜುನಾಥ್, ಎಂ.ಎಸ್‌ಸಿ.,ಬಿ.ಇಡಿ. ರವರು 200 ರೂಪಾಯಿಗಳ ಧನಸಹಾಯಮಾಡುವುದರ ಮೂಲಕ ಪತ್ರಿಕೆಯ ಪೋಷಕರಾಗಲು ಒಪ್ಪಿರುವುದನ್ನು ಪ್ರಕಟಿಸಲು ನಮಗೆ ಅತೀವ ಹೆಮ್ಮೆ.

ಎರಡನೆಯದಾಗಿ ಸಹೃದಯರೂ, ಹಿತೈಷಿಗಳೂ, ಆದ ಕಂಟ್ರಾಕ್ಟರ್ ಸಿ. ರಾಜಣ್ಣ, ಬೆಂಗಳೂರು ಅವರು ಪತ್ರಿಕೆಯ ಪುರೋಭಿವೃದ್ಧಿಗಾಗಿ 200 ರೂ.ಗಳ ಧನಸಹಾಯವಿತ್ತು ಪೋಷಕರಾಗಲು ಒಪ್ಪಿರುವುದಕ್ಕೆ ಸಂಘವು ಅತೀವ ಸಂತೋಷಪಡುತ್ತದೆ.


## ಸಿದ್ಧಗಂಗಾ

ಸಂಪಾದಕರು :
ಸಂ। ವಿ। ಟಿ. ವಿ. ಮುತ್ತಾಚಾರ್ಯ,
ಬಿ ಎ. (ಆನರ್ಸ್) ಬಿ.ಇಡಿ.

ಸಹಾಯ-ಸಂಪಾದಕರು :
ಪಂಡಿತ್ ಕೆ. ಪಿ. ಶಿವಲಿಂಗಯ್ಯ,
ಕೆ. ಜಿ. ನಾಗರಾಜಪ್ಪ, ಎಂ.ಎ.,
ರಾಜೀವಲೋಚನ, ಎಂ.ಎ ,
ಕೆ. ಜಿ. ರಂಗಯ್ಯ, ಬಿ.ಎ.,

ಪ್ರಕಾಶಕರು :
ಹಳೆಯ ವಿದ್ಯಾರ್ಥಿ ಸಂಘ, ಶ್ರೀ ಸಿದ್ಧಗಂಗಾ

ಮುದ್ರಕರು :
ಪೃಥ್ವಿಪ್ರಿಂಟರ್ಸ್, ಬಳೇಪೇಟೆ, ಬೆಂಗಳೂರು-೨

ಪತ್ರಿಕೆ ಹೊರಡುವ ಸ್ಥಳ :
ಶ್ರೀ ಸಿದ್ಧಗಂಗಾ ಕ್ಷೇತ್ರ.

ಪತ್ರಿಕೆ ಹೊರಡುವ ಮಾಸಗಳು :
ಜನವರಿ
ಏಪ್ರಿಲ್
ಜುಲೈ
ಅಕ್ಟೋಬರ್


## ಲೇಖಕರಲ್ಲಿ ವಿನಂತಿ

"ಸಿದ್ಧಗಂಗಾ" ಪತ್ರಿಕೆಗೆ ಮಾನ್ಯ ಲೇಖಕರಿಂದ ಸಾಹಿತ್ಯದ ವಿವಿಧ ಪ್ರಕಾರಗಳ ಲೇಖನಗಳನ್ನು ಕೃತಜ್ಞತಾಪೂರ್ವಕವಾಗಿ ಸ್ವೀಕರಿಸಲಾಗುವುದು. ತಮ್ಮ ಹೆಸರು, ವಿಳಾಸಗಳ ಸಹಿತ ಕಾಗದದ ಒಂದು ಮಗ್ಗಲು, ಲೇಖನಗಳನ್ನು ಸ್ಪಷ್ಟವಾಗಿ ಬರೆದು ಕಳುಹಿಸಲು ಪ್ರಾರ್ಥನೆ. ಧರ್ಮ, ಸಂಸ್ಕೃತಿ, ಕಲೆ, ಸಾಹಿತ್ಯ ವಿಜ್ಞಾನ, ಶಿಕ್ಷಣ ಮುಂತಾದ ವಿಚಾರಗಳನ್ನೊಳಗೊಂಡ ಲೇಖನಗಳಿಗೆ ಮಾನ್ಯತೆ ಹೆಚ್ಚು. ಲೇಖಕರು ತಮ್ಮಲ್ಲಿ ಲೇಖನದ ಪ್ರತಿಯನ್ನು ಕಾಯ್ದಿಟ್ಟುಕೊಳ್ಳಲು ಪ್ರಾರ್ಥನೆ. ಲೇಖನಗಳನ್ನೂ, ವಿಮರ್ಶೆಗೆ ಗ್ರಂಥಗಳನ್ನೂ, ವಿನಿಮಯಕ್ಕೆ ಪ್ರತಿಗಳನ್ನೂ ಸಂಪಾದಕರ ವಿಳಾಸಕ್ಕೆ ದಯವಿಟ್ಟು ಕಳುಹಿಸಬೇಕು.

ಶ್ರೀವಾಣಿ

# 'ಸಾಕ್ಷಾತ್ಕಾರ'

ವ್ಯಕ್ತಿ ಭಗವಂತನ ಸಾಕ್ಷಾತ್ಕಾರಕ್ಕೆ ಜಗತ್ತನ್ನ ಬಿಡಬೇಕಾಗಿಲ್ಲ, ಸಂಸಾರ ತೊರೆಯಬೇಕಾಗಿಲ್ಲ, ಕಾಡನ್ನು ಸೇರಬೇಕಾಗಿಲ್ಲ. ತಾನು ಇದ್ದಲ್ಲೇ ಸಾಧನೆ ಮಾಡಿ ಸಿದ್ಧಿಯನ್ನು ಪಡೆಯಬಹುದು, ಸಾಕ್ಷಾತ್ಕಾರವನ್ನು ಹೊಂದಬಹುದು ಅದು ಹೆಚ್ಚಾಗಿ ಮನಸ್ಸನ್ನೇ ಅವಲಂಬಿಸಿದೆ. ಅದಕ್ಕೆ ಒಂದು ಕತೆ ನೆನಪಾಗುತ್ತದೆ:

ಒಬ್ಬ ವಿದ್ವಾಂಸನಿಗೆ ನಗರದ ಯಾಂತ್ರಿಕವಾದ ಕೃತಕಜೀವನದಿಂದ ಬೇಜಾರಾಯಿತು. ಹಳ್ಳಿಯ ಮುಗ್ಧವಾದ ಸಹಜಜೀವನಕ್ಕೆ ಮಾರುಹೋದನು. ನಗರವನ್ನು ತೊರೆದು ಹಳ್ಳಿಗೆ ಹೋದನು. ಕೆಲವು ತಿಂಗಳು ಹಳ್ಳಿಯಲ್ಲಿ ಕಾಲಹಾಕಿದನು. ಆಗ ಅವನಿಗೆ ಹಳ್ಳಿಯ ಜೀವನದ ಅರಿವಾಯಿತು. ಅಲ್ಲಿ ದ್ವೇಷ, ಅಸೂಯೆ, ಜಗಳ ತಾಂಡವವಾಡುತ್ತಿದ್ದವು. ಅದನ್ನು ಕಂಡು ಅಸಹ್ಯವಾಯಿತು ಅವನಿಗೆ. ನಮ್ಮ ಧರ್ಮ, ಸಂಸ್ಕೃತಿಯ ತವರು ಅರಣ್ಯ. ಅಲ್ಲಿ ಸುಖ ಶಾಂತಿ ಸಿಕ್ಕೇ ಸಿಕ್ಕುತ್ತದೆಂದು ಹಳ್ಳಿಯನ್ನು ತೊರೆದು ಕಾಡನ್ನು ಸೇರಿ ಗುಡಿಸಲನ್ನು ಕಟ್ಟಿಕೊಂಡು ವಾಸಿಸತೊಡಗಿದನು. ಕೆಲವು ದಿನಗಳಲ್ಲಿಯೇ ವಿದ್ವಾಂಸನಿಗೆ ಕಾಡಿನ ಜೀವನ ಜಿಗುಪ್ಸೆಯನ್ನು ತಂದಿತು. ಕಾಡಿನಲ್ಲಿ ಬದುಕಿಗಾಗಿ ಹೋರಾಟ ಕ್ಷಣಕ್ಷಣವೂ ನಡೆಯುತ್ತಿತ್ತು. ಒಂದು ಪ್ರಾಣಿ ಮತ್ತೊಂದು ಪ್ರಾಣಿಗೆ ಆಹಾರ, ಯಾವ ಜೀವಿಗೂ ಒಂದರೆಕ್ಷಣವೂ ಭದ್ರತೆಯಾಗಲಿ, ನೆಮ್ಮದಿಯಾಗಲಿ ಇಲ್ಲ. ವಿದ್ವಾಂಸ ಕ್ಷಣಕಾಲ ಚಿಂತಿಸಿ ಯಾವ ಜೀವಿಯ ಸಹವಾಸವೂ ಬೇಡ ಎಂದು ಪ್ರಶಾಂತವಾಗಿರುವ ನೀರಿನ ವಾಸವನ್ನು ಬಯಸಿದನು. ಎದೆ ಮಟ್ಟದ ನೀರಿಗೆ ಹೋಗಿ ನಿಂತು ವಾಸಿಸತೊಡಗಿದನು. ಅಲ್ಲಿ ಎಲ್ಲಿಯೂ ಕಾಣದ ಭೀಕರ ದೃಶ್ಯ ಅವನ ಕಣ್ಣಿಗೆ ಬಿದ್ದಿತು. ಮೀನು ಮೀನನ್ನೇ ನುಂಗಿ ಬದುಕುತ್ತಿದ್ದುವು. ಸ್ವಜಾತಿ ಸ್ವಜಾತಿಯನ್ನೇ ನುಂಗಿ ಬದುಕುವುದನ್ನು ಕಂಡೊಡನೆ ಚಂಗನೆ ನೀರಿನಿಂದ ನೆಗೆದು ದಡಕ್ಕೆ ಬಂದನು. ಸುಖ ಶಾಂತಿ ಮೃಗ ಮರೀಚಿಕೆಯ ಬೆನ್ನು ಹತ್ತಿದಹಾಗಾಯಿತು. ನಗರದ ಕೃತಕ ಜೀವನ, ಹಳ್ಳಿಯ ಅಸೂಯಾ ಜೀವನ, ಕಾಡಿನ ಕ್ರೌರ್ಯ, ನೀರಿನ ಸ್ವಜಾತಿ ಭಕ್ಷಣೆಯ ಬಾಳು—ಇದೆಲ್ಲವನ್ನೂ ನೆನೆದಾಗ ಅವನಿಗೆ ವೈರಾಗ್ಯ ಮೂಡಿತು. ಇನ್ನು ಈ ಪ್ರಪಂಚದಲ್ಲಿ ಬದುಕಿ ಪ್ರಯೋಜನವಿಲ್ಲ ಎಂಬ ತೀರ್ಮಾನಕ್ಕೆ ಬಂದನು. ಆತ್ಮಹತ್ಯೆಯ ಸುಲಭ ಹಾದಿಯನ್ನು ಚಿಂತಿಸತೊಡಗಿದನು. ಅದೇ ಮಾರ್ಗದಲ್ಲಿ ಹೋಗುತ್ತಿದ್ದ ಒಬ್ಬ ಸನ್ಯಾಸಿ ವಿದ್ವಾಂಸನನ್ನು ಕಂಡನು. ಸನ್ಯಾಸಿಗೆ ಅವನ ಸ್ಥಿತಿಗತಿಕಂಡು ಮರುಕಹುಟ್ಟಿ ''ಅಯ್ಯಾ ಇದೇಕೆ ಇಲ್ಲಿ ಹೀಗಿದ್ದೀಯ ? ನಿನ್ನ ಚಿಂತೆಗೆ ಕಾರಣವೇನು ?"

"ಸ್ವಾಮಿ ಹೇಳಿ ಪ್ರಯೋಜನವಾದರೂ ಏನು ? ಈ ಪ್ರಪಂಚ ಬಿಡಲು ಸಿದ್ಧನಾಗುತ್ತಿದ್ದೇನೆ."

''ಅಯ್ಯಾ ಅಷ್ಟೊಂದು ಜಿಗುಪ್ಸೆಯೇ ನಿನಗೆ ಬದುಕು ?"

''ಹೌದು ಸ್ವಾಮಿ. ಜೀವನ ಎಲ್ಲೆಲ್ಲೂ ಅಸಹ್ಯ, ಹೊಲಸ—ನಗರ, ಹಳ್ಳಿ, ಕಾಡು. ನೀರು—ಎಲ್ಲಿಗೆ ಹೋದರೂ ನೆಮ್ಮದಿ ಇಲ್ಲ, ಶಾಂತಿ ಇಲ್ಲ. ಬದುಕಿಯಾದರೂ ಪ್ರಯೋಜನವೇನು ಸ್ವಾಮಿ ?" ಎಂದು ತಾನು ಇದುವರೆವಿಗೂ ಕಂಡುಂಡ ಅನುಭವವನ್ನು ಸನ್ಯಾಸಿ ಹೇಳಿಕೊಂಡನು.

''ಹಾಗಾದರೆ ಆತ್ಮಹತ್ಯೆಯಿಂದ ನಿನಗೆ ನೆಮ್ಮದಿ ಸಿಕ್ಕುತ್ತದೆಯೆ ? ಶಾಂತಿ ದೊರಕುತ್ತದೆಯೆ ?"

''ಸದ್ಯಕ್ಕೆ ಈ ಜಿಗುಪ್ಸಾಮಯ ಪ್ರಪಂಚದಿಂದ ಬಿಡುಗಡೆ ದೊರಕುತ್ತದೆ. ಅದೇ ನನಗೆ ಆನಂದವನ್ನುಂಟುಮಾಡುತ್ತದೆ."

''ಆತ್ಮಹತ್ಯೆ ಮಹಾಪಾಪ. ಪ್ರಪಂಚದಲ್ಲಿ ಬದುಕಲಾರದ ಹೇಡಿಗಳು ದುರ್ಬಲಚಿತ್ತದಿಂದ ಕರ್ತವ್ಯ ಭ್ರಷ್ಟರಾಗಿ ಕೈಗೊಳ್ಳುವ ಸುಲಭಮಾರ್ಗವೇ ಆತ್ಮಹತ್ಯೆ ಎಂದು ತಿಳಿದಿದೆಯೊ ?"

''ನಾನೂ ಒಬ್ಬ ವಿದ್ವಾಂಸ. ಓದುವ ಹುಚ್ಚು ಬಾಲ್ಯದಿಂದ ಬಂದಿದೆ. ಅನೇಕ ಶಾಸ್ತ್ರಗಳು, ಗ್ರಂಥಗಳನ್ನು ಓದಿದ್ದೇನೆ. ತಿಳಿದವರೊಂದಿಗೆ ಚರ್ಚೆನಡೆಸಿದ್ದೇನೆ, ಎಲ್ಲ ರೀತಿಯ ಜೀವನವನ್ನೂ ಕಂಡಿದ್ದೇನೆ, ಕೇಳಿದ್ದೇನೆ, ಅನುಭವಿಸಿದ್ದೇನೆ. ಎಲ್ಲಾ ಆದಮೇಲೆ ಈ ಅಂತ್ಯ ತೀರ್ಮಾನಕ್ಕೆ ಬಂದಿದ್ದೇನೆ. ಇನ್ನು ಬದುಕಿ ನನಗೆ ಪ್ರಯೋಜನವಿಲ್ಲ, ಪ್ರಪಂಚಕ್ಕೂ ಪ್ರಯೋಜನವಿಲ್ಲ. ಈ ಅಪ್ರಯೋಜಕವಾದ ಬದುಕು ಕೊನೆಗಾಣುವುದರಿಂದ ಯಾವ ಪಾಪವೂ ಬರದು. ಅದರಿಂದ ಇನ್ನೂ ಒಳ್ಳೆಯದೇ ಆಗುವುದು."

''ಹಾಗಾದರೆ ಇದರಿಂದ ಯಾರಿಗೂ ತೊಂದರೆಯಾಗದೆ ?"

''ಖಂಡಿತವಾಗಿಯೂ ಇಲ್ಲ. ಚನ್ನಾಗಿ ಯೋಚಿಸಿ ನೋಡಿದ್ದೇನೆ."

''ಅಯ್ಯಾ ವಿದ್ವಾಂಸ ಚನ್ನಾಗಿ ಆಲೋಚಿಸಿ ನೋಡು ಅನೇಕ ಯುಗಗಳ, ಜನ್ಮಗಳ ಪುಣ್ಯದ ತಪಸ್ಸಿನ ಫಲವೇ ಮಾನವಜನ್ಮ ಪ್ರಾಪ್ತಿ. ಅದನ್ನು ವ್ಯರ್ಥಮಾಡಬಾರದು. ನಿನಗೆ ಕಾಡಿನ, ನಾಡಿನ, ನೀರಿನ ಬದುಕು ಹೇಗೆ ಅಸ್ವಾಭಾವಿಕವಾಗಿ ಅಸಹ್ಯವಾಗಿ ಕಂಡಿತೊ ಹಾಗೆಯೇ ನಿನ್ನ ಬದುಕೂ ಅಸಹಜ ಅಸ್ವಾಭಾವಿಕವಾಗಿ ಕಾಣುವುದೆಂದುತಿಳಿ. ಬದುಕು ಚೆನ್ನಾಗಿ ನಮ್ಮ ಆಲೋಚನೆಗಳು, ಭಾವನೆಗಳು, ದೃಷ್ಟಿಯನ್ನೇ ಅವಲಂಬಿಸಿದೆ. ನೀನು ಆತ್ಮಹತ್ಯೆ ಮಾಡಿಕೊಳ್ಳುವುದರಿಂದ ಇಡೀ ಸಮಾಜ ನಿನ್ನನ್ನು ದೂರುತ್ತದೆ, ಅಲ್ಲದೆ ನಿನ್ನ ಹೆಣ ಕೊಳೆತು ದುರ್ವಾಸನೆಯಿಂದ ಅನೇಕ ವ್ಯಕ್ತಿಗಳ ನಿತ್ಯಕರ್ಮಗಳಿಗೆ ಭಂಗ ಬರುತ್ತದೆ. ನಿನ್ನ ಆಲೋಚನೆಯ ಸರಣಿಯೇ ದೋಷದಿಂದ ಕೂಡಿರುವಾಗ ಮತ್ತೊಬ್ಬರನ್ನು ದೂರಿ ಪ್ರಯೋಜನವಾದರೂ ಏನು ?"

''ಸ್ವಾಮಿ, ನಿಮ್ಮ ಮಾತಿನ ಸರಣಿಯೇ ಒಂದು ರೀತಿಯಾಗಿದೆ. ನಾನು ಬದುಕಿ ಪ್ರಯೋಜನವಿಲ್ಲ, ಸತ್ತೂ ಪ್ರಯೋಜನವಿಲ್ಲ. ಹಾಗಾದರೆ ಏನು ಮಾಡಲಿ ? ಈ ಪ್ರಪಂಚಕ್ಕೆ ಹೇಗೂ ಬಂದುಬಿಟ್ಟಿದ್ದೇನೆ. ಇನ್ನು ಬಿಡುಗಡೆಯ ಮಾರ್ಗ ಯಾವುದು ? ಈ ನರಕದಿಂದ ಪಾರಾಗುವ ಒಂದು ಹಾದಿ ತೋರುವಿರಾ, ನೆಮ್ಮದಿಯಿಂದ ಬಾಳುವ ಒಂದು ಜಾಗ ತೋರುವಿರಾ ?"

ಸನ್ಯಾಸಿ ಗಹಗಹಿಸಿ ನಕ್ಕುಬಿಟ್ಟನು. ವಿದ್ವಾಂಸನಿಗೆ ಚುಚ್ಚಿದಂತಾಯಿತು

''ಏನು ಸ್ವಾಮಿ. ನನ್ನ ಬದುಕನ್ನ ಕಂಡ ನಿಮಗೂ ಹಾಸ್ಯವೆ ?"

''ನನ್ನ ಮಾತಿರಲಿ. ಒಂದಿಷ್ಟು ಸರಿಯಾಗಿ ಚಿಂತಿಸಿದರೆ, ಒಳಗಣ್ಣು ತೆರೆದರೆ ನಿನ್ನ ಬದುಕನ್ನು ಕಂಡರೆ ನಿನಗೇ ನಗು ಬರದಿರದು."

''ಅದು ಹೇಗೆ ಸ್ವಾಮಿ ?"

''ಅಯ್ಯಾ ನಿನ್ನನ್ನು ಕಂಡರೆ ನನಗೆ ಮಹಾಭಾರತದ ಒಂದು ಪ್ರಸಂಗ ನೆನಪಿಗೆ ಬರುತ್ತದೆ. ಒಮ್ಮೆ ಭಗವಂತ ದುರ್ಯೋಧನ, ಧರ್ಮರಾಯ ಇಬ್ಬರನ್ನೂ ಕರೆದು, ಧರ್ಮರಾಯನನ್ನು ಕುರಿತು ''ಅಯ್ಯಾ ಧರ್ಮರಾಯ ಜಗತ್ತಿನಲ್ಲಿ ಯಾರು ಯಾರು ಕೆಟ್ಟವರು ನೋಡಿ ಬಂದು ಹೇಳು" ಎಂದನು. ದುರ್ಯೋಧನನನ್ನು ಕುರಿತು ''ಅಯ್ಯಾ ದುರ್ಯೋಧನ ಜಗತ್ತಿನಲ್ಲಿ ಒಳ್ಳೆಯವರು ಎಷ್ಟು ಮಂದಿ ಇದ್ದಾರೆ ಲೆಕ್ಕಹಾಕಿಕೊಂಡು ಬಾ" ಎಂದು ಇಬ್ಬರನ್ನೂ ಕಳುಹಿಸಿದನು. ಇಬ್ಬರೂ ಪ್ರಪಂಚದ ಮೂಲೆಮೂಲೆ ಸುತ್ತಿ ಬಂದು ಧರ್ಮರಾಯನು ''ಕೃಷ್ಣ ಪರಮಾತ್ಮ, ಜಗತ್ತಿನ ಎಲ್ಲಾ ಜನರನ್ನೂ ಕಂಡೆ ಒಬ್ಬರೂ ಕೆಟ್ಟವರು ನನ್ನ ಕಣ್ಣಿಗೆ ಬೀಳಲೇ ಇಲ್ಲ" ಎಂದನು. ದುರ್ಯೋಧನನು ''ಭಗವಂತ, ಎಲ್ಲಾ ಸುತ್ತಿ ಬಂದೆ ಜಗತ್ತಿನಲ್ಲಿ ಒಳ್ಳೆಯವನು ಎನ್ನುವ ಒಂದು ನರಪಿಳ್ಳೆಯನ್ನೂ ಕಾಣಲಿಲ್ಲ" ಎಂದನು. ಭಗವಂತ ಇಬ್ಬರ ಮಾತನ್ನೂ ಕೇಳಿ ನಕ್ಕನು. ಈ ಪ್ರಸಂಗದಿಂದಲೇ ನಮಗೆ ಗೊತ್ತಾಗುತ್ತದೆ. ದುರ್ಯೋಧನನ ದೃಷ್ಟಿಯೇ ಕೆಟ್ಟದ್ದಾದ್ದರಿಂದ ಬರಿ ಕೆಟ್ಟದ್ದೇ ಕಂಡಿತು. ಧರ್ಮರಾಯನ ದೃಷ್ಟಿ ಒಳ್ಳೆಯದಾದ್ದರಿಂದ ಜಗತ್ತೆಲ್ಲಾ ಒಳ್ಳೆಯದಾಗಿ ಕಂಡಿತು. ಇದಕ್ಕೆಲ್ಲಾ ಮನಸ್ಸೇ ಕಾರಣ ಎಂಬುದು

ಸ್ಪಷ್ಟವಾಗುತ್ತದೆ. ಮನಸ್ಸೇ ಮನುಷ್ಯನ ಬಂಧನಕ್ಕೂ, ಬಿಡುಗಡೆಗೂ, ಪಾಪಕ್ಕೂ, ಪುಣ್ಯಕ್ಕೂ, ನರಕಕ್ಕೂ-ಸ್ವರ್ಗಕ್ಕೂ, ಸುಖಕ್ಕೂ, ದುಃಖಕ್ಕೂ. ಪ್ರೀತಿಗೂ, ದ್ವೇಷಕ್ಕೂ ಕಾರಣವಾದುದು. ಮನಸ್ಸು ಶುದ್ಧವಾದರೆ ಆನಂದ, ಅಶುದ್ಧವಾದರೆ ಬದುಕು ಜಿಗುಪ್ಸೆಯುಂಟಾಗುತ್ತದೆ. ಅದನ್ನೇ ಶರಣರು ತುಂಬಾ ಚೆನ್ನಾಗಿ ಹೇಳಿದ್ದಾರೆ:

''ಸಕಲೇಂದ್ರಿಯಂಗಳಲ್ಲಿ ವಿಕಾರಿಸುವ ಮನವ ಸೆಳೆದು
ನಿಂದಾತ ಸುಖಿ
ಪಂಚೇಂದ್ರಿಯಗಳಿಚ್ಛೆಯಲ್ಲಿ ಕೀಳುಮನಂಗೊಂಡು
ಸುಳಿವಾತ ದುಃಖಿ
ಮನಸ್ಸು ಬಹಿರ್ಮುಖವಾಗಲು ಮಾಯಾ ಪ್ರಪಂಚ
ಮನವಂತರ್ಮುಖವಾದರೆ ಅವಿರಳ ಜ್ಞಾನಿ
ಮನವು ಮಹದಲ್ಲಿ ನಿಂದಿರಲಾತ ಮುಕ್ತನು ·
ಮನೋಲ್ಲಯವಾದರೆ ಸೌರಾಷ್ಟ್ರ ಸೋಮೇಶ್ವರಲಿಂಗ
ದಲ್ಲಿ ಅಭೇದ್ಯನು"

ಇದನ್ನೇ ಶಿವಶರಣೆ ಅಕ್ಕಮಹಾದೇವಿ ಸ್ಪಷ್ಟವಾಗಿ ಇನ್ನೂ ಸರಳವಾಗಿ ಹೇಳಿದ್ದಾಳೆ:—

''ಲೋಕದ ಚೇಷ್ಟೆಗೆ ರವಿ ಬೀಜವಾದಂತೆ
ಕರಣಂಗಳ ಚೇಷ್ಟೆಗೆ ಮನವೇ (ಬೀಜ) ಬೀಜ
ಎನಗುಳ್ಳದೊಂದು ಮನ, ಆ ಮನ ನಿಮ್ಮಲ್ಲಿ
ಸಿಲ್ಕಿದ ಬಳಿಕ
ಎನಗೆ ಭವವುಂಟೇ ಚನ್ನಮಲ್ಲಿಕಾರ್ಜುನಾ"

ಆದ್ದರಿಂದ ನಾವು ದೊಡ್ಡವರ ಬದುಕಿನ, ಅನುಭವದ ನೆರಳಿನಲ್ಲಿ ನಡೆದು ನಮ್ಮ ಬದುಕಿನಲ್ಲಿ ಸತ್ಯವನ್ನು ಕಾಣಬೇಕು. ನೀನು ಕಾಡಿನಲ್ಲಿರು, ನಾಡಿನಲ್ಲಿರು, ನೀರಿನಲ್ಲಿರು—ಎಲ್ಲೇ ಇರು. ಮನಸ್ಸು ಭಗವಂತನಲ್ಲಿ ಲೀನವಾದರೆ ಅದೇ ಸ್ವರ್ಗ, ಅದೇ ಬಾಳಲು ಯೋಗ್ಯವಾದ ಭೂಮಿ. ಈಗ ನೀನು ಮನಸ್ಸಿನ ಗುಲಾಮನಾಗಿ ಒದ್ದಾಡುತ್ತಿರುವುದರಿಂದ ಪೇಚಾಟ ನಿನ್ನ ಮನಸ್ಸಿನ ಹಿಂದೆ ''ನಾನು" ಎಂಬುದು ಕುಳಿತಿರುವುದರಿಂದ ಒದ್ದಾಟ. ಜಗತ್ತಿನಲ್ಲಿ ನಿನ್ನದೇ ಶ್ರೇಷ್ಠವಾದ ಬದುಕೆಂದು ಭಾವಿಸಿರುವುದೇ ಈ ಹಾರಾಟ, ತೊಳಲಾಟ........"

''ಹಾಗಾದರೆ ಈ ಮನಸ್ಸನ್ನು ಗೆಲ್ಲಲು ಮಾಡಬೇಕಾದುದೇನು?"

''ಹೊರಗಿನ ಯಾವ ವಸ್ತುವಿನಿಂದಲೂ, ಶಕ್ತಿಯಿಂದಲೂ ಮನಸ್ಸನ್ನು ಗೆಲ್ಲಲು ಸಾಧ್ಯವಾಗದು. ಮನಸ್ಸು ಪರಮಾತ್ಮನ ಅಧೀನವಾಗಬೇಕು. ಮನಸ್ಸನ್ನು ಹಾಗೇ ಅಧೀನಮಾಡಲು ಮನಸ್ಸೇ ಸಾಧನೆಯ ವಸ್ತು ಮೊದಲು ಮನಸ್ಸನ್ನು ಗೆಲ್ಲು. ಅನಂತರ ಭಗವಂತನನ್ನೇ ಗೆಲ್ಲುವೆ, ಸ್ವರ್ಗವೂ ನಿನ್ನ ವಶವಾಗುವುದು. ನೀನು ಈಗ ಹೋಗು. ನಗರದಲ್ಲೇ ಸಾಧನೆಮಾಡು. ಜಾಗ ಮುಖ್ಯವಲ್ಲ. ನಡೆಸುವ ಜೀವನ, ಬಳಸುವ ಭಾವ, ನೋಡುವ ದೃಷ್ಟಿಯೇ ಮುಖ್ಯ. ಅದನ್ನು ಬದಲಿಸಿ ಬಾಳು. ಸುಖ ಸಿಕ್ಕೇಸಿಕ್ಕುತ್ತದೆ."

''ಸ್ವಾಮಿ ಈಗ ನನ್ನ ಅರಿವಾಯಿತು, ಸತ್ಯ ಕಂಡಿತು, ನನ್ನನ್ನು ಉದ್ಧಾರ ಮಾಡಿದಿರಿ. ಬೆಳಕಿತ್ತು ನನ್ನನ್ನು ಉಳಿಸಿದಿರಿ. ನಾನು ನಿಮಗೆ ಅತ್ಯಂತ ಚಿರಋಣಿ"

''ತಕ್ಷಣ ಹೊರಡು ಚನ್ನಾಗಿ ಬದುಕು, ಸತ್ಯಕ್ಕೆ ಚಿರಋಣಿಯಾಗು, ಧರ್ಮಕ್ಕೆ ಚಿರಋಣಿಯಾಗು, ಭಗವಂತನಿಗೆ ಚಿರಋಣಿಯಾಗು, ದೇಶಕ್ಕೆ ಚಿರಋಣಿಯಾಗಿ ಬಾಳು. ನೀನು ನಿಂತ ನೆಲವೇ ಸಾಧನಾರಂಗವಾಗಿ ಸ್ವರ್ಗಸುಖ ಸಿಗಲಿ ಹೋಗಿಬಾ."

ವಿದ್ವಾಂಸ ಬಗ್ಗಿ ದೀರ್ಘದಂಡ ನಮಸ್ಕಾರ ಮಾಡಿದನು. ಸನ್ಯಾಸಿಯಿಂದ ಆಶೀರ್ವಾದ ಪಡೆದು, ಸನ್ಯಾಸಿ ತೋರಿಸಿದ ಹೊಸ ದೃಷ್ಟಿಯ ಹಾದಿಯಲ್ಲಿ ನಡೆದು ನಗರದ ತನ್ನ ಮನೆ ಸೇರಿದನು. ಅಂದಿನಿಂದ ಎಲ್ಲಾ ಬದಲಿಸಿತು. ನಗರ ಕೃತಕವಾಗಿ ಕಾಣಲಿಲ್ಲ, ಭಗವಂತನ ಸೃಷ್ಟಿ ವಿಚಿತ್ರವಾಗಿ, ಅತ್ಯಾಶ್ಚರ್ಯಕರವಾಗಿ ಕಂಡಿತು. ನಗರದ ಕೃತಕಜೀವನದಲ್ಲೇ ಅವನ ಆನಂದದ ನೂತನ ಬದುಕಿನ ಚಿಲುಮೆ ಚಿಮ್ಮಿತು. ಸೃಷ್ಟಿ ಆನಂದ ಕೊಟ್ಟಿತು. ವಿದ್ವಾಂಸನು ಬಹಳ ಸುಖವಾಗಿ ಬಾಳಿದನು. ಸನ್ಯಾಸಿಗೆ ಕೃತಜ್ಞನಾಗಿದ್ದನು.

(ಸಂಗ್ರಹಕಾರ : ಕೆ. ಜಿ. ನಾಗರಾಜಪ್ಪ)

## ಮಹರ್ಷಿಗಳ ಕಥೆಗಳು-೨

# ಆತ್ರೇಯ ಋಷಿ

ಆತ್ರೇಯ ಋಷಿ ಮಹಾತಪಸ್ವಿಯಾಗಿ ಅದ್ಭುತ ಸಿದ್ಧಿಗಳನ್ನು ಪಡೆದ. ಸುರರೊಡೆಯ ಇಂದ್ರನು ಕೂಡ ಈತನ ಅಚ್ಚರಿಯ ಸಿದ್ಧಿಗಳಿಗೆ ಮಾರುಹೋಗಿ ತನ್ನ ಆಸ್ಥಾನಕ್ಕೆ ಕರೆಸಿ ದೊಡ್ಡ ಗೌರವ ನೀಡಿದ; ಅಮೃತ ಪಾನಮಾಡಿಸಿದ; ಅಪ್ಸರೆಯರ ನರ್ತನಾದಿಗಳಿಂದ ಸಂತೋಷಪಡಿಸಿದ. ದೇವೇಂದ್ರನ ಈ ಮಹಾ ವೈಭವ ವನ್ನುನೋಡಿ ಆತ್ರೇಯನಿಗೆ ಅಪರಿಮಿತವಾದ ಹರ್ಷ ವುಂಟಾಯಿತು.

ತನ್ನ ಬಡ ಆಶ್ರಮಜೀವನವು ಆತ್ರೇಯನಿಗೆ ಬಹಳ ತುಚ್ಛವಾಗಿ ಕಂಡಿತು. ಇಂದ್ರನ ವೈಭವಯುತವಾದ ಜೀವನದ ಮುಂದೆ ತನ್ನ ಒಣವಿಋಷಿ ಜೀವನವು ಬಹಳ ನೀರಸವಾಗಿ ಕಂಡಿತು.

ತನ್ನ ಪತ್ನಿಯನ್ನು ಕರೆದು ''ನನಗೆ ಈ ಕಾಡಿನ ಜೀವನ ಬೇಸರ ತರುತ್ತಿದೆ. ಸುಂದರವಾದ ವೈಭವಪೂರ್ಣವಾದ ಲೋಕವೊಂದನ್ನು ಸೃಷ್ಟಿಮಾಡಿ ಅಲ್ಲಿ ವಾಸಮಾಡೋಣ" ಎಂದನು.

ಭೋಗ ಜೀವನದ ಕಡೆ ಹೊರಳಿದ ಆತ್ರೇಯನು ಮಹಾನುಭಾವನಾದ ಭಗವಾನ್ ವಿಶ್ವಕರ್ಮನ ಒಲುಮೆ ಯನ್ನು ಸಂಪಾದಿಸಿ ಇಂದ್ರಲೋಕದಂತಹ ಮತ್ತೊಂದು ಲೋಕವನ್ನು ಪಡೆದು ಅಲ್ಲಿ ವಾಸಿಸ ತೊಡಗಿದನು

ಹೊಸಲೋಕದಲ್ಲಿ ಭೋಗಭಾಗ್ಯಗಳಿಗೆ ಯಾವ ಕೊರತೆಯೂ ಇರಲಿಲ್ಲ. ಅಪಾರವಾದ ಸಂಪತ್ಸಮೃದ್ಧಿ ಗಳಿಂದ ಸಂತೋಷಚಿತ್ತನಾಗಿ ಋಷಿ ಕಾಲಕಳೆಯುತ್ತಿದ್ದ.

ಸಂಪತ್ತು ಕಾಲಾನುಕಾಲಕ್ಕೆ ವಿಪತ್ಕಾರಕವಾಗುತ್ತ ದೆಂದು ತಿಳಿಯಲು ಆ ಋಷಿಗೆ ಬಹಳಕಾಲ ಬೇಕಾಗ ಲಿಲ್ಲ

ಆತನ ಅಪಾರ ಸಿರಿಸಂಪದಗಳನ್ನು ಕೊಳ್ಳೆಯಿಡಲು ರಕ್ಕಸರು ಒಳಸಂಚು ನಡೆಸಿದರು. ದೊಡ್ಡಸೈನ್ಯದೊಡನೆ ಅವರು ಆತ್ರೇಯನ ಹೊಸಲೋಕವನ್ನು ಮುತ್ತಿದರು. ಅವನ ಸಮಸ್ತವೂ ಸೂರೆಹೋಯಿತು. ಅರಮನೆಯು ಭಂಡಾರ ಬರಿದಾಯಿತು ನರ್ತಕಿಯರು ನಾಶವಾದರು. ಪರಿವಾರ ಪರಿತಪಿಸಿತು. ನೀರ ಮೇಲಣಗುಳ್ಳೆ ನಿಜವಲ್ಲ ವಲ್ಲವೆ ?

ಆತ್ರೇಯ ಅದುರಿದ. ಆರ್ತತ್ರಾಣ ಪಾರಾಯಣನಾದ ವಿಶ್ವಕರ್ಮನನ್ನು ಮರೆಹೊಕ್ಕ.

" ನೀನು ನಿರ್ಮಿಸಿಕೊಟ್ಟ ಈ ಸ್ವರ್ಗಲೋಕದಲ್ಲಿ ನನಗಾವ ಸುಖವೂ ದೊರೆಯಲಿಲ್ಲ. ಇದು ಕೇವಲ ತೋರಿಕೆಯ ಸುಖ. ನಿಜವಾದ ಸುಖವಿದಲ್ಲ. ಇದು ನನಗೆ ಬೇಡ "

ವಿಶ್ವಕರ್ಮ " ತಥಾಸ್ತು " ಎಂದ.

ಗೌತಮಿತೀರದ ಪ್ರಶಾಂತವಾದ ಆಶ್ರಮ ಮತ್ತೆ ಋಷಿ ಯನ್ನು ಕೈಬೀಸಿ ಕರೆಯಿತು. ಪುಟಗೊಂಡ ಚಿನ್ನದಂತೆ ಪಶ್ಚಾತ್ತಾಪ ಪಟ್ಟ ಋಷಿಯು ತಪೋನಿರತನಾಗಿ ಭಗ ವತ್ಕೃಪೆಯನ್ನು ಸಂಪಾದಿಸಿ ಶುದ್ಧನಾಗಿ ಮುಕ್ತಿಪಡೆದ.

- ಮುತ್ತು



# ಶ್ರೀಮನ್ನಿರಂಜನ ಉದ್ಧಾನ ಶಿವಯೋಗಿಗಳು

[ಸಿದ್ಧಗಂಗಾಕ್ಷೇತ್ರ]

ಡಾ|| ಜಿ. ಮರುಳಸಿದ್ಧಯ್ಯ ಎಂ.ಪಿ.ಹೆಚ್.ಡಿ.

ಮಾನಸಗಂಗೋತ್ರಿ, ಮೈಸೂರು



ಶ್ರೀಮನ್ನಿರಂಜನ ಉದ್ಧಾನ ಶಿವಯೋಗಿಗಳು ತುಮಕೂರು ತಾಲ್ಲೂಕು ಶ್ರೀ ಸಿದ್ಧಗಂಗಾ ಕ್ಷೇತ್ರಾಧ್ಯಕ್ಷರಾಗಿದ್ದು ಮೈಸೂರು ಸಂಸ್ಥಾನದ ಜನತೆಗೆ ಮಹೋಪಕಾರ ಮಾಡಿ ಕಣ್ಮರೆಯಾದ ಮಹಾವಿಭೂತಿ ಪುರುಷರು. ಶ್ರೀಸಿದ್ಧಗಂಗಾ ಕ್ಷೇತ್ರವು ಇವರ ಕಾಲಕ್ಕಿಂತ ಇವರ ಕರಕಮಲ ಸಂಜಾತರಾದ ಶ್ರೀ|| ನಿ|| ಪ್ರ|| ಶ್ರೀ|| ಶಿವಕುಮಾರ ಸ್ವಾಮಿಗಳ ನೇತೃತ್ವದಲ್ಲಿ ಇಂದು ಬಹಳ ಮುಂದುವರಿದು ಜನತೆಗೆ ಸರ್ವತೋಮುಖವಾದ ಸರ್ವೋಪಕಾರಿ ಸಂಸ್ಥೆಯಾಗಿದೆ. ಸದ್ಯದಲ್ಲಿ ಶ್ರೀ ಕ್ಷೇತ್ರದ ಅಂಗವಾಗಿ ಸಂಸ್ಕೃತ ಕಾಲೇಜು, ಹೈಸ್ಕೂಲು, ಮಿಡಲ್‌ಸ್ಕೂಲು, ವಿವಿಧ ತಾಂತ್ರಿಕಶಾಲೆ (Engineering college), ಉಪಾಧ್ಯಾಯರ ಶಿಕ್ಷಣ ಶಾಲೆ, ಇತ್ಯಾದಿ ಶಿಕ್ಷಣ ಸಂಸ್ಥೆಗಳೂ, ವೇದ ಪಾಠಶಾಲೆ, ವಿದ್ಯಾರ್ಥಿ ಸಂಘಗಳು ಧಾರ್ಮಿಕ ಶಿಕ್ಷಣ ಇತ್ಯಾದಿ ನೈತಿಕ ಶಿಕ್ಷಣಾಂಗಗಳು ಉಗಮುವಾಗಿವೆ. ಸಂಸ್ಕೃತ ಮತ್ತು ವೇದ ಪಾಠಶಾಲೆಗಳನ್ನುಳಿದು ಇತರ ಎಲ್ಲಾ ಸಂಸ್ಥೆಗಳೂ ಈಗಿನ ಶ್ರೀಗಳ ತಪೋಬಲದಿಂದ ಹಾಗೂ ಅವರ ಗುರುಪರಂಪರಾಶೀರ್ವಾದ ಬಲದಿಂದ ರೂಪುಗೊಂಡಿವೆ. ಶ್ರೀ ಮನ್ನಿರಂಜನ ಉದ್ಧಾನ ಶಿವಯೋಗಿಗಳು ನಿರೂಪಿಸಿದ ವಿಶಾಲ ವಿಶ್ವತೋಮುಖ ಧರ್ಮದ ಆಧಾರದ ಮೇಲೆ ಸಂಸ್ಥೆಯ ಮುನ್ನಡೆ ಮೆಚ್ಚತಕ್ಕದಾಗಿದೆ.

ಸಂಸ್ಥೆಯ ಸೂಕ್ಷ್ಮ ಇತಿಹಾಸ:—ಶ್ರೀ ಮಹುದ್ಧನ ಶಿವಯೋಗಿಗಳ ಜೀವನ ಪರಿಚಯಕ್ಕೆ ಮುಂಚೆ ಸಂಸ್ಥೆಯ ಸಂಕ್ಷಿಪ್ತ ಪರಿಚಯ ಅವಶ್ಯಕ. ಈ ಸಂಸ್ಥೆಯ ಅಧಿಷ್ಠಾತೃಗಳೆಂದರೆ ಶ್ರೀ ತೋಂಟದ ಸಿದ್ಧಲಿಂಗ ಶಿವಯೋಗಿಗಳು. [16ನೆಯ ಶತಕ] ಇವರೇ ಜನಜನಿತರಾದ ಶ್ರೀತೋಂಟದಾರ್ಯರು. ನೊನ್ನೆ ಮೊನ್ನೆಯವರಾದರೂ ಇವರ ವಿಷಯದಲ್ಲೂ ಖಚಿತವಾದ ಸುದ್ಧಿ ದುರ್ಲಭವಾಗಿದೆ. ಇವರ ಮಹಿಮೆಯನ್ನು ಸಾರುವ ಹೊತ್ತಗೆಗಳು ಹತ್ತಾರಿದ್ದರೂ ಸಿದ್ಧೇಶ್ವರ ಪುರಾಣ, ಸಿದ್ಧೇಶ್ವರ ವಚನ, ಸ್ವತಂತ್ರ ಸಿದ್ಧಲಿಂಗೇಶ್ವರ ವಚನ ಇತ್ಯಾದಿ ಗ್ರಂಥಗಳಿಂದ ಇವರ ಸಾಧನೆ ಸಿದ್ಧಿಗಳನ್ನು ಊಹಿಸಬೇಕಾಗಿದೆ. ಶ್ರೀ ಸಿದ್ಧಲಿಂಗೇಶ್ವರ ಮಹಿಮಾಸ್ತುತ ಇಲ್ಲಿ ನನ್ನ ಗಮನದಲ್ಲಿಲ್ಲ. ಅವರ ಅಪಾರ ಮಹಿಮೆಗೆ ಕರ್ನಾಟಕದಲ್ಲಿ ಅವರಿಗೆ ಸ್ವತಂತ್ರ "ದ್ವಿತೀಯ ಶಂಭು" ಎಂಬ ಈ ಎರಡು ಮಾತೇ ಸಾಕು. ಈ ತೋಂಟದಾರ್ಯರು ಶಿಷ್ಯ ಸಮೇತ ಶ್ರೀ ಸಿದ್ಧಗಂಗಾ ಕ್ಷೇತ್ರದಲ್ಲಿ ತಪಸ್ಸನ್ನಾಚರಿಸಿಕೊಂಡು ಕೆಲಕಾಲ ಇದ್ದಾಗಲೇ ಈಕ್ಷೇತ್ರದ ಉದಯ. 'ಶರಣನಿಂದುದೇ ಈ ಕ್ಷೇತ್ರ". ಶ್ರೀ ಚಿಕ್ಕದೇವರಾಜ ಒಡೆಯರು ಈ ಕ್ಷೇತ್ರದಲ್ಲಿ ಈಗಿರುವ ಸಿದ್ಧಲಿಂಗನ ದೇವಾಲಯವನ್ನು ಕಟ್ಟಿಸಿ ಸ್ವಾಮಿಯ ಸುಂದರಮೂರ್ತಿಯನ್ನು ಪ್ರತಿಷ್ಠಿಸಿರಬಹುದು. [ಸಮೀಪದ ದೇವರಾಯ ಪಟ್ಟಣವೇ ಈ ಮಾತಿಗೆ ಆಧಾರ] ಕ್ಷೇತ್ರದಲ್ಲಿರುವ "ಸಿದ್ಧಗಂಗಾ ಅಮ್ಮನವರ" [ಸಿದ್ಧಿಗಂಗಾ] ದೇವಾಲಯದಲ್ಲಿ ಸಾರ್ವಕಾಲಿಕ ಗಂಗಾಲಾಭಕ್ಕೆ ಈ ಶ್ರೀ ತೋಂಟದಾರ್ಯರೇ ಕಾರಣರೆಂದು ಪ್ರತೀತಿ. ಶಿಷ್ಯ ನೋರ್ವನ ಅವಸಾನ ಕಾಲದಲ್ಲಿ ನೀರು ಸಿಕ್ಕದೆ ಇದ್ದದ್ದರಿಂದ ಶರಣ ಶಿವಸಿದ್ಧಲಿಂಗ ಯತಿಗಳು ತಮ್ಮ ಮುಂಡಿ

ಯಿಂದ ಈ ಗಂಗೆಯ ಉದ್ಭವಕ್ಕೆ ಕಾರಣರೆಂದು ಅವರ ಪವಾಡಕಥೆಯೂ ಇದೆ.

ಶರಣನ ಸಿದ್ಧಲಿಂಗನ ಪಾದಪ್ರತಿಷ್ಠೆಯಿಂದ ಈ ಕ್ಷೇತ್ರದಲ್ಲಿ ಕ್ಷೇತ್ರತ್ವ ಪ್ರಾರಂಭವಾಯಿತು. ಅಂದಿನಿಂದ ಸುಮಾರು 1900ರವರೆಗೆ ಅನೇಕ ಯತಿಗಳು (ಕಂತೇ ಭಿಕ್ಷದ ಸ್ವಾಮಿಗಳು) ಬಂದು ನಿಂದುಹೋದುದಾಗಿ ತಿಳಿದು ಬರುತ್ತೆ. ಈಗಲೂ ಶ್ರೀಕ್ಷೇತ್ರದಲ್ಲಿ ಮುಪ್ಪಿನ ಸ್ವಾಮಿಗಳವರೆಂದು ಒಂದು ಗದ್ದುಗೆ ಮಾತ್ರ ಸುಂದರವಾಗಿ ನಿಂದಿದೆ. 17ನೇ ಶತಕದಿಂದ 19ನೇ ಶತಕದವರೆಗೆ ಬಂದು ಹೋದ ಶ್ರೀಗಳವರಲ್ಲಿ ನಮಗೆ ಕಂಡಂತೆ ಶ್ರೀ ಅಟವೀಸ್ವಾಮಿ ಶಿವಯೋಗಿಗಳನ್ನು ಬಿಟ್ಟರೆ ಶ್ರೀ ಮುಪ್ಪಿನ ಸ್ವಾಮಿಗಳೊಬ್ಬರೇ ಅಲ್ಲಿ ಕೇಳಿ ಬರುವವರು. ಹೀಗೆ ಅನೇಕ ಯತಿಗಳು ಶ್ರೀಕ್ಷೇತ್ರದಲ್ಲಿ ದಾಸೋಹ ಮಾಡಿಕೊಂಡು ಶ್ರೀ ಸ್ವಾಮಿಯ ದೇವಾಲಯಕ್ಕೆ ಬಂದ ಯಾತ್ರಾರ್ಥಿಗಳಿಗೆ ಸಹಾಯಕರಾಗಿದ್ದರೆಂಬುದು ಮಾತ್ರ ನಿರ್ವಿವಾದ. ಇಂಥ ಕ್ಷೇತ್ರವನ್ನು ಸುವ್ಯವಸ್ಥಿತ ಮಾಡಿದ ಯುಗಪ್ರವರ್ತಕರೆಂದರೆ ಶ್ರೀ ಅಟವಿ ಸ್ವಾಮಿಗಳು (18ನೇ ಶತಕದ ಅಂತ್ಯಭಾಗ) ಶ್ರೀ ಮದಟವೀಸ್ವಾಮಿಗಳ ಹಿರಿಮೆಗರಿಮೆಗಳು ಅವರ ಸಮಕಾಲೀನರಾಗಿದ್ದ ಶೃಂಗೇರಿ ಶ್ರೀಗಳಿಗೂ ತಿಳಿದಿದ್ದಿತೆಂದು ಲೇಖಕನಿಗೆ ಕರ್ಣಾಕರ್ಣಿಕೆಯಿಂದ ಗೊತ್ತಿದೆ. ಶ್ರೀ ಅಟವೀಶ ಯತಿಗಳು ಶ್ರೀಕ್ಷೇತ್ರದಲ್ಲೇ ನಿಂತು ಅಲ್ಲಿ ಒಂದು ಮಠ ಕಟ್ಟಲು ಪ್ರಾರಂಭಿಸಿದರು. ಕುಚೇಲ ಕುಟೀರ, ಶ್ರೀಪರಮಾತ್ಮನ ದೃಷ್ಟಿಯಿಂದ ಸ್ವರ್ಣಮಯವಾಗಿ ಕುಚೇಲನಿಗೆ ಗುರುತಿಲ್ಲವಾಯಿತಂತೆ. ಶ್ರೀ ಸಿದ್ಧಲಿಂಗನ ಕೃಪೆ ಮತ್ತು ಶ್ರೀಗಳವರ ನಿಷ್ಕಪಟ ವೀರ ವಿರಕ್ತಿ, ನಿಷ್ಠೆ. ತಪೋಬಲಗಳಿಂದ ಶ್ರೀ ಅಟವೀಸ್ವಾಮಿಗಳ ಗದ್ದುಗೆ ಒಂದು ಬಿಟ್ಟು ಇನ್ನು ಎಲ್ಲಾ ದಿವ್ಯವಾಗಿ ಮಾರ್ಪಾಡಾಗಿದೆ, ಮಾರ್ಪಾಡಾಗುತ್ತಿದೆ.

ಇಂಥ ನಿಷ್ಠಾವಂತ ಶಿವಯೋಗಿಗಳು ಬ್ರಹ್ಮನಿಷ್ಠರು. ಈಗಿನ ಕಾಲದವರ ದೃಷ್ಟಿಯಲ್ಲಿ ಶ್ರೀ ಅಟವಿ ಸ್ವಾಮಿಗಳು (ಜನಪ್ರಿಯ ಅಡವಪ್ಪನೋರು) ಅವರ ಕರಕಮಲ ಸಂಜಾತ ಶ್ರೀ ಉದ್ಧಾನ ಶಿವಯೋಗಿಗಳು [ಉದ್ಧಾನಪ್ಪನೋರು] ಅಷ್ಟೇನೂ ಶ್ರೋತ್ರಿಯರಲ್ಲ ಈಗಿನ ಶ್ರೀ ಶಿವಕುಮಾರ ಸ್ವಾಮಿಗಳು [ಶಿವಪ್ಪ ಸ್ವಾಮಿಗಳು] ತ್ರಿಭಾಷಾ ಪದವೀಧರರು [ಆಂಗ್ಲ, ಸಂಸ್ಕೃತ, ಕನ್ನಡ] ಶ್ರೀ ಅಡವಪ್ಪನವರು ಶ್ರೀಕ್ಷೇತ್ರಕ್ಕೆ ನಿಜವಾದ ಅಸ್ತಿಭಾರ ಹಾಕಿದವರೆನ್ನಬೇಕು. ಅವರೇ ಈಗಿನ 'ದಾಸೋಹ' ಅನ್ನದಾನ ಮತ್ತು ವಿದ್ಯಾದಾನ (ವೇದ ಪಾಠಶಾಲೆ) ಇವುಗಳನ್ನು ಪ್ರಾರಂಭಿಸಿದವರು. ''ಅಡವಪ್ಪನವರ ಒಲೆಗೆ ಹಾಕಿದ ಬೆಂಕಿ ಇನ್ನು ಆರಿಲ್ಲ'' ಎಂದು ಜನರು ಇಂದಿಗೂ ಹೇಳುತ್ತಿದ್ದಾರೆ. ಅವರ ಮೇಲ್ಪಂಕ್ತಿಯನ್ನೇ ಶ್ರೀ ಉದ್ಧಾನಪ್ಪನವರು ಅನುಸರಿಸಿ ಅಭಿವೃದ್ಧಿಪಡಿಸಿದರು.

ಉದ್ಧಾನಪ್ಪನವರು:— ಶ್ರೀ ಮನ್ನಿರಂಜನ ಉದ್ಧಾನ ಶಿವಯೋಗಿಗಳ ಪೂರ್ವಾಶ್ರಮದ ಹೆಸರು ರುದ್ರಪ್ಪ. ಶ್ರೀ ಸಿದ್ದಗಂಗೆಗೆ ಸುಮಾರು ಹತ್ತು ಮೈಲಿ ದೂರದಲ್ಲಿ ನಿಜಗಲ್ ದುರ್ಗವಿದೆ [ಕೆಂಪೇಗೌಡನ ಕೋಟೆ]. ಅಲ್ಲಿಗೆ ಲಕ್ಕೂರೆಂಬ ಗ್ರಾಮ ಅತಿ ಸಮೀಪ. ಅಲ್ಲಿ ಒಂದು ವೀರಶೈವ ಬಡಕುಟುಂಬದಲ್ಲಿ ಈ ರುದ್ರಪ್ಪನವರ ಜನನ ಸುಮಾರು 1860ರಲ್ಲಿ ನಾಗರಿಕ ನವಚೈತನ್ಯಾಕಾಂಕ್ಷೆಗಳಿಲ್ಲದ ಬಡ ಕುಟುಂಬದವರಾಗಿದ್ದರಿಂದ ಅಲ್ಲಿನ ಪ್ರಾಥಮಿಕ ಶಾಲೆಯೇ ಅವರ ಮಹಾಪ್ರೌಢಶಾಲೆಯಾಯಿತು. ವೃತ್ತಿ ಕೃಷಿ, ಪಶುಪಾಲನೆ, ಆಡು ಮೇಯಿಸುವುದು. ಹೀಗೆ ಆಡು ಮೇಯಿಸುತ್ತಿದ್ದ ಇವರಿಗೆ, ಸಿದ್ಧರ ಬೆಟ್ಟವೆಂದು ನಾಮಾಂತರವಿರುವ ಈ ನಿಜಗಲ್ ದುರ್ಗದಲ್ಲಿ ಒಬ್ಬ ಸಿದ್ಧಿಪುರುಷ ಅಥವಾ ಸಿದ್ಧಪುರುಷರ ದರ್ಶನವಾಯಿತು. (ಆಯಿತಂತೆ ಎಂದು ಬರೆಯುವುದಿಲ್ಲ. ನಾನು ಅದನ್ನು ನಂಬಿದ್ದೇನೆ. ಏಕೆಂದರೆ ಅದು ಅವರೇ ಹೇಳಿದ ಮಾತು. ಅವರೇ ಹೇಳಿದ ಮಾತನ್ನು ಅಲ್ಲಗಳೆಯುವುದು ವಿಜ್ಞಾನಿಗಳ ವಾದವಲ್ಲ. ಅಜ್ಞಾನಿಗಳ ವಾದ) ಅಂದಿನಿಂದ ಅವರ ಆಧ್ಯಾತ್ಮಿಕ ಜೀವನದ ಸುಪ್ರಭಾತರವಿ ಅವರನ್ನು ಬೆಳಗಿಸಿದ.

ಧರ್ಮಕರ್ಮ ಸಂಯೋಗದಿಂದ ಇವರು ಆ ಸಿದ್ಧಗಿರಿಯಲ್ಲಿ [ಸಿದ್ಧರ ಬೆಟ್ಟ ಅಥವಾ ನಿಜಗಲ್ ದುರ್ಗ] ಯೋಗ, ತಾಂತ್ರಿಕ ಮಾಂತ್ರಿಕಗಳಲ್ಲಿ ನಿಷ್ಣಾತರಾಗಿ ಶ್ರೀ ಮದಟವೀ ಸ್ವಾಮಿಗಳ ಪ್ರಭಾವಾಕರ್ಷಿತರಾಗಿ ಶ್ರೀ ಸಿದ್ಧಗಂಗೆಗೆ ಹೋಗಿಬಿಟ್ಟರು. ಅಲ್ಲಿ ಎಂದಿನಂತೆ ಶ್ರೀಗಳ ಸೇವೆ, ಶ್ರೀಕ್ಷೇತ್ರ ಸೇವೆ, ಇವರ ಪರಮ ಕರ್ತವ್ಯವಾಯಿತು. ಸೌದೆ ತರುವುದು, ಹುಲ್ಲೋರಗಿಸುವುದು ಇತ್ಯಾದಿಯಾಗಿ ಅಲ್ಲಿ ಅಡವಪ್ಪನ ಅಚ್ಚು

ನೆಚ್ಚಿನ ಶಿಷ್ಯರಾದರು ಸಂಕ್ಷೇಪವಾಗಿ ಹೇಳುವುದಾದರೆ ರುದ್ರಪ್ಪ ಶ್ರೀ ಅಡವಪ್ಪನವರ ಪಂಚಪ್ರಾಣವಾದರು. ಅಡವಪ್ಪನವರಿಗೆ ಈ ರುದ್ರಪ್ಪನ ಭೌತಿಕ ವರ್ಚಸ್ಸಲ್ಲದೆ ನೆಲದಮರೆಯ ನಿಧಾನದಂತಿರುವ ಅವರ ಅಧ್ಯಾತ್ಮಿಕ ಹಾಗೂ ಅಥರ್ವಣಿಕ ವರ್ಚಸ್ಸು ತಿಳಿದಿರಲಿಲ್ಲದಿರಬಹುದು. ಆದರೆ ಒಂದೆರಡು ಘಟನೆಗಳಿಂದ ಅವು ವ್ಯಕ್ತವಾದುವು.

ಬ್ರಹ್ಮರಾಕ್ಷಸವೃತ್ತಾಂತ:– ಹಾಸನದ ತಾಲ್ಲೂಕು "ತೋಟದ ಗದ್ದೆ" ಎಸ್ಟೇಟಿನ ಕಾಫಿ:ಪ್ಲಾಂಟರ್ ದೇವಪ್ಪ ಗೌಡರೆಂಬ ಮಹನೀಯರು ಹತ್ತು ವರ್ಷಗಳ ಹಿಂದೆ ಶಿವಾಧೀನರಾದರು. ಅವರು ಗಣ್ಯ ಪ್ಲಾಂಟರ್. ದೃಢಕಾಯ ಸ್ಫುರದ್ರೂಪಿಗಳು. ಅವರಿಗೆ ಬ್ರಹ್ಮರಾಕ್ಷಸನ ಭೂತಚೇಷ್ಟೆಯುಂಟಾಗಿ ಅವರ ಗತಿ 'ಶಿವನಿಗೇ ಪ್ರೀತಿ' ಆಯಿತು. ಅಡವೀ ಸ್ವಾಮಿಗಳ ಕೀರ್ತಿ ಆ ವೇಳೆಗೆ ಅವರೆಲ್ಲರಿಗೂ ತಿಳಿದಿತ್ತು. ಅದಕ್ಕಾಗಿ ದೇವಪ್ಪಗೌಡರನ್ನು ಅವರ ಬಂಧುಗಳು ಹಗ್ಗಹಾಕಿ ಹಿಡಿದು ಶ್ರೀ ಸಿದ್ಧಗಂಗಾ ಕ್ಷೇತ್ರಕ್ಕೆ ಕರೆತಂದರಂತೆ. (ಭೂತಚೇಷ್ಟೆಯಲ್ಲಿ ನಂಬಿಕೆ ಯಿಲ್ಲದ ಕನ್ನಡಿಗರು ಬಹು ಕಡಿಮೆ) ಆ ಬ್ರಹ್ಮರಾಕ್ಷಸ ಬಂದೊಡನೆ ''ನನ್ನ ಗುರುವೆಲ್ಲಿ, ನನ್ನ ಗುರುವೆ" ಎಂದು ಆರ್ಭಟಿಸುತ್ತಿದ್ದನಂತೆ. ಬಂಧುಗಳು ಆತನನ್ನು "ಇಗೋ ನಿನ್ನ ಗುರು"ವೆಂದು ಅಟವೀಸ್ವಾಮಿಗಳಿಗೂ ಅಚ್ಚರಿ ಯಾಯಿತು. ಶ್ರೀ ಕ್ಷೇತ್ರಾಧ್ಯಕ್ಷ ಶ್ರೀ ಅಟವೀಸ್ವಾಮಿ ಗಳಲ್ಲದೆ ಇನ್ನೆಲ್ಲಿ ಈತನ ಗುರು ಎಂದು ಎಲ್ಲರೂ ಶಂಕಿಸು ತ್ತಿರುವಾಗ ನಮ್ಮ ಶ್ರೀ ರುದ್ರಪ್ಪನವರು ಸಾದೆ ಗಾಡಿ ಹೊಡೆದುಕೊಂಡು ಬರುತ್ತಿದ್ದರಂತೆ. ಅವರು ದೂರ ದಲ್ಲಿರುವಾಗಲೇ ''ಅಗೋ ಅಲ್ಲಿ ನನ್ನ ಗುರು, ನನ್ನ ಗುರು" ಎಂದು ಆರ್ಭಟಿಸಿ, ಅಪ್ಪಳಿಸಿ, ನಾಗಾಲೋಟ ದಲಿ, ಪಾಷಾರಿಹೋದರಂತೆ ದೇವಪ್ಪಗೌಡರು. ಈ ಅನ್ಮೃತ ಘಳಿಗೆಯಲ್ಲಿ ರುದ್ರಪ್ಪನವರು ಪುನರ್ಜನ್ಮ ಪಡೆದದ್ದು. ಪುಣ್ಯ, ಗಣ್ಯ ಉದ್ದಾನ ಶಿವಯೋಗಿ ಯಾದದ್ದು. ಏನೂ ನಿರೀಕ್ಷಿಸದೆ ಬರುತ್ತಿದ್ದ ರುದ್ರಪ್ಪ ನವರ ಪಾದಗಳನ್ನು ''ಗುರುವೇ, ತ್ರಾಹಿಮಾಂ, ತ್ರಾಹಿಮಾಂ, ನನ್ನನ್ನು ಕಾಪಾಡಿ, ಕಾಪಾಡಿ, ಎಂದು ಅತ್ತು ಅಂಗಲಾಚಿ, ಬಾಚಿ ತಬ್ಬಿ ತಣ್ಣಗೊಳಿಸಿತು ಆ ಭೂತಾವೇಶದ ಬಿಸಿ. ಜನಸ್ತೋಮ ಶ್ರೀಗುರು ಅಟವೀ ಸ್ವಾಮಿಗಳೊಡನೆ ಆ ಹೃದಯಪರಿವರ್ತಕ ಘಟನೆ ಗಳನ್ನು ನೋಡಿ ಸ್ತಂಭೀಭೂತವಾಯಿತು. ತುಸು ಹೊತ್ತು ಕಳೆಯಿತು. ಆಗ ರಾಕ್ಷಸರಾಗಿದ್ದರೂ ರಾಕ್ಷಸ ನಂತಿದ್ದ ಶ್ರೀಗೌಡರು ಆವೇಶದಿಂದ, ಉದ್ವೇಗಾವೇಗ ದಿಂದ ಈ ಮಾತುಗಳನ್ನು ಹೇಳಿದರು. ''ನಾವಿಬ್ಬರೂ ಅಲ್ಲಿ ಕಾಣುವ ರಾಮಲಿಂಗನಬೆಟ್ಟದಲ್ಲಿ ಸಿದ್ಧಪ್ಪನವರ ಗವಿಯಲ್ಲಿ [ದೊಡ್ಡಸಿದ್ದಪ್ಪ ಚಿಕ್ಕಸಿದ್ದಪ್ಪ ಗವಿಗಳು] ತಪಸ್ವಿಗಳಲ್ಲವೆ ಒಮ್ಮೆ ಸಿದ್ದಲಿಂಗನ ದರ್ಶನಕ್ಕೋಸ್ಕರ ಬಂದಾಗ ಶ್ರೀ ಅಮ್ಮನವರು [ಗಂಗಾದೇವಿ] ದರ್ಶನ ವಿತ್ತರು. ಆಗ ನಾನು ಆಕೆಯನ್ನು ಮೋಹಿಸಿದ ಕಾರಣ ದೇವಿಯು ನನ್ನನ್ನು ರಾಕ್ಷಸನಾಗುವಂತೆ ಶಪಿಸಲಿಲ್ಲವೇ. ಅನುಕಂಪಿ, ಅನುಪಮದಾನಿ, ಸಿದ್ದಲಿಂಗನನ್ನು ನಾನು ಮರೆಹೋಗಲು ಆ ಸಿದ್ದಲಿಂಗ ''ಶಾಪ ಅನುಭವಿಸಿಯೇ ತೀರಬೇಕು ಶೀಘ್ರ, ನಿವಾರಣೋಪಾಯ ಕೇಳು" ಎನ್ನಲು, ನಿನ್ನೊಡನೆ ಇರುವಂತೆ ನಾನು ಕೇಳಲಿಲ್ಲವೇ. ಬ್ರಹ್ಮಚಾರಿಯಾದ ನೀನು ಅದಕ್ಕೆ ಸಮ್ಮತಿಸಲು ''ನೀವು ಮನುಷ್ಯ ರೂಪಿನಿಂದ ಈ ಕ್ಷೇತ್ರವನ್ನು [ಶ್ರೀ ಸಿದ್ಧಗಂಗಾ ಕ್ಷೇತ್ರವನ್ನು ಅನ್ನದಾನ ವಿದ್ಯಾದಾನಗಳಿಂದ] ಉದ್ಧರಿಸಿ ಮಹಾದಾಸಿ[ಉದ್ದಾನಿ]ಮಹಾಪುರುಷನಾಗು" ಎನ್ನಲು. ಅದಕ್ಕೆ ನೀನು ಒಪ್ಪಲಿಲ್ಲವೆ. ಏನು ಗುರುವೆ? ಏನು ಮರವೆ?" ಇತ್ಯಾದಿ ತಿಳಿಸಲು ಆಗ ಆ ರುದ್ರಪ್ಪನಿಗೆ ಪೂರ್ವಜನ್ಮದ ಋಷಿಚರ್ಯೆ ನೆನಪಿಗೆ ಬಂದು ಅವರೂ ಗೌಡರೂ ಬಿಕ್ಕಿ ಬಿಕ್ಕಿ ಅತ್ತೂ ಕರೆದು ಶ್ರೀ ಅಡವೀಸ್ವಾಮಿಗಳ ಚರಣ ಗಳಿಗೆ ನಮೋನಮೋ ಎಂದು ನಮಸ್ಕರಿಸಿದರಂತೆ. ಆ ಕ್ಷಣದಲ್ಲಿ ದೇವಪ್ಪಗೌಡರ ಆದಿಭೌತಿಕ ಬಾಧೆ ಪಿಶಾಚ ಪೀಡ ತಪ್ಪಿ ಇಬ್ಬರೂ ಕೊನೆಯುವರೆಗೂ ಪರಸ್ಪರ ಭಾವಭರಿತರಾದರು. ಕೂಡಲೇ ಅವರಿಬ್ಬರೂ ಶಿವ ಗಂಗಾ ಕ್ಷೇತ್ರ, ಸಿಜಗಲ್, ರಾಮಲಿಂಗನ ಬೆಟ್ಟ ಸಿದ್ಧರ ಬೆಟ್ಟ [ಮಾವಿನಕೆರೆ ಬಳಿ] ಇತ್ಯಾದಿ ಗೋಪ್ಯ ಗುಹೆಗಳಿಗೆ ಭೇಟಿಯಿತ್ತು ಅಂದಿನಿಂದ ಎಂದಿನಂತೆ ಪರಸ್ಪರಾವಲಂಬಿ ಗಳಾದುದಕ್ಕೆ ಇನ್ನೂ ಅನೇಕ ನಿದರ್ಶನಗಳಿವೆ. ಆ ಕ್ಷಣದಿಂದ ರುದ್ರಪ್ಪನವರಲ್ಲಿ ವಿಶೇಷ ಆಸ್ಥೆ ಶ್ರೀ ಅಡವೀ ಸ್ವಾಮಿಗಳಿಗಾಯಿತು. ಶ್ರೀಗಳು ರುದ್ರಪ್ಪನನ್ನೇ ತಮ್ಮ ಉತ್ತರಾಧಿಕಾರಕ್ಕೆ ಯೋಗ್ಯನೆಂದು ಭಾವಿಸಿ ದರು. ಆದರೆ ಅದಕ್ಕೆ ಮುಂಚೆಯೇ ತೊಟ್ಟಿಲಕೆರೆ ಮಠ ದಲ್ಲಿ ಸಿದ್ಧಗಂಗಾ ಮಠದ ''ಮರಿ" ಇದ್ದಿತಂತೆ. ಅದು

ತಪ್ಪಿ ಶ್ರೀ ಉದ್ಧಾನಸ್ವಾಮಿಗಳು ಈ ಶ್ರೀ ಸಿದ್ಧಗಂಗೆಯಲ್ಲಿ ಪ್ರತಿಷ್ಠಿತರಾದುದಕ್ಕಾಗಿ ಅನೇಕ ಹೀನಕೃತ್ಯಗಳು ನಡೆದವು. ಅವು ಇಲ್ಲಿ ಬೇಡ. ತಾಂತ್ರಿಕ ಉದ್ಧಾನ ಶಿವಯೋಗಿ—ಶ್ರೀ ಅಡವೀಸ್ವಾಮಿಗಳಿಗೆ ಪಶ್ಚಿಮಕಾಲ ಸನ್ನಿಹಿತವಾಗಲು ಶ್ರೀ ಉದ್ಧಾನಸ್ವಾಮಿಗಳ ದ್ವೇಷಿಗಳು ಒಂದು ಕುತಂತ್ರ ಮಾಡಿದರು. ಶ್ರೀ ಅಡವಪ್ಪನವರ ಖಾಯಿಲೆ, ಉದ್ಧಾನಪ್ಪನ ಕೈಚಳಕ ಇವುಗಳನ್ನು ಕಂಡು, ಅವರಿಗೆ ಮಾಟ ಮಂತ್ರ ಬರುತ್ತೆ. ಜಾಗ್ರತೆ ಅಡವಪ್ಪನವರು ಶಿವಾಧೀನರಾದರೆ ತಾನು ಸ್ವಾಮಿಯಾಗಿ ಇಲ್ಲಿ ಬರುವ ಆದಾಯವನ್ನು ನುಂಗಬಹುದೆಂದು ಹೀಗೆ ಮಾಡಿದ್ದಾರೆ. ಎಂದು ಅಡವೀ ಸ್ವಾಮಿಗಳವರ ವೃಂದ ಆರೋಪಿಸಿದರು. ಶ್ರೀ ಅಡವೀ ಸ್ವಾಮಿಗಳು ಸತ್ಯ ಶಿವಯೋಗಿಗಳಾದರೂ ವಯೋಮಿತಿಯಿಂದ ಅದನ್ನು ನಂಬುವುದರಲ್ಲಿದ್ದರು. ಇದನ್ನು ಮನಗಂಡ ಉದ್ಧಾನಪ್ಪನವರು ಅನ್ಯಥಾ ಗತಿಯಿಲ್ಲದೆ ತನಗೆ ಕರಗತವಾಗಿದ್ದ ಅಥರ್ವಣ ವಿದ್ಯೆಯನ್ನು ಕ್ಷಣ ಕಾಲ ಸ್ಮರಿಸಿ ಶ್ರೀ ಅಡವಪ್ಪನವರ ಸಮಕ್ಷಮ ಅವರ ಶಿಷ್ಯರು ಮಾಡಿಸಿದ್ದ ಮಾಟ ಪ್ರಯೋಗವನ್ನು ಹುಡುಕಿ ಕಾಲಿನಿಂದ ಕಿತ್ತೊಗೆದರಂತೆ. ತದನಂತರ ಅಡವೀ ಸ್ವಾಮಿಗಳಿಗೆ ನಿರಂತರ ಕಾಲಿನಿಂದ ಉರಿ ನಿಂತಂತೆ. ಇದನ್ನರಿತ ಶ್ರೀ ಅಡವೀಸ್ವಾಮಿಗಳು ಕೂಡಲೆ ಉದ್ಧಾನ ಸ್ವಾಮಿಗಳಿಂದ ವಚನ ಪಡೆದು ಅವರಲ್ಲಿದ್ದ ಇಂಥ ರಾತ್ರಿ ಶ್ರದ್ಧಾ ಪ್ರಯೋಗವನ್ನು ಇನ್ನುಮುಂದೆ ಮಾಡುವುದಿಲ್ಲವೆಂದು ವಚನ ಕೊಟ್ಟು ಪ್ರಮಾಣ ಮಾಡಿದರಂತೆ ಉದ್ಧಾನಪ್ಪನವರಿಗೆ. ಗುರುಗಳ ಮಾತಿನಂತೆ ಉದ್ಧಾನಪ್ಪನವರು ಅಲ್ಲಿಂದ ಮುಂದೆ ಕೇವಲ "ಬ್ರಹ್ಮ ತೇಜೋಬಲಂ ಬಲಂ" ಎಂಬುದನ್ನೇ ನಂಬಿ ಜನ ಸ್ತೋಮಕ್ಕೆ ಉಪಕರಿಸಿದರು.

ಇನ್ನೊಂದು ಪ್ರಸಂಗ :—ಈ ರುದ್ರಪ್ಪನವರು ಕೈಚಮತ್ಕಾರ ಬಲವಿದ್ದವರಷ್ಟೆ. ತಾರುಣ್ಯದಲ್ಲಿ ಸೌದೆಗಾಗಿ ಕಾಡಿಗೆ ಹೋಗಿ ಬರುವಾಗ ಕತ್ತಲಾದಲ್ಲಿ ಗಾಡಿಯವರು "ಸ್ವಾಮಿ, ಕತ್ತಲು ಗವ್ವನ್ನುತ್ತೆ, ಈವಾಗ ಬ್ಯಾಡಿ. ನಾಳೆ ಬೆಳಗಿನ ಝಾವ ಗಾಡಿ ಊಡೋಣ" ಎಂದರೆ "ಹೆದರಬೇಡಿ ಬನ್ನಿ" ಎಂದು ಒಮ್ಮೆ ಸಾಲು ಸಾಲಾಗಿ ಕೊಳ್ಳಿದೆವ್ವಗಳನ್ನು ನಿಲ್ಲಿಸಿ ಬೆಳಕು ಮಾಡಿ ಶ್ರೀ ಕ್ಷೇತ್ರದವರೆಗೂ ಗಾಡಿಗಳು ಬೆಳಕಿನಲ್ಲಿ ಸುರಕ್ಷಿತವಾಗಿ ಬರುವಂತೆ ಮಾಡಿದರಂತೆ.

ಮತ್ತೊಂದು—ಶ್ರೀ ಸಿದ್ಧಗಂಗಾ ಕ್ಷೇತ್ರದ ಬೆಟ್ಟಕ್ಕೆ [ಸಿದ್ಧಗಿರಿ] ಸಮೀಪದ ರಾಮಲಿಂಗ ಬೆಟ್ಟದಲ್ಲಿ ದೊಡ್ಡ ಸಿದ್ದಪ್ಪನವರ ಗವಿಗೆ ಈ ಉದ್ಧಾನಪ್ಪನವರು ಆ ಬ್ರಹ್ಮ ರಾಕ್ಷಸ ಪ್ರಸಂಗದ ತರುವಾಯ ಪ್ರತಿ ಅಮಾವಾಸ್ಯೆ, ಹುಣ್ಣಿಮೆಗಳಲ್ಲಿ ಹೋಗಿಬರುತ್ತಿದ್ದರಂತೆ. ಒಮ್ಮೆ ಇವರಿಗೆ ಕಾಣದೆ ಹಿಂಬಾಲಿಸಿದ ಶಿವಪೂಜಾ ಮರಿವೀರಪ್ಪನೆಂಬವ ಗವಿಯ ಹತ್ತಿರಕ್ಕೆ ಹೋಗಲು "ಮಾನುಷ ಸಂಗಾತವೇಕೆ" ಎಂದ ಮೇಲೆ ಹಿಂದೆ ನೋಡಿ ವೀರಪ್ಪನಿಗೆ ಬಾಳೆಹಣ್ಣು ಕೊಟ್ಟು ಹಿಂದಿರುಗುವಂತೆ ಅಪ್ಪಣೆ ಮಾಡಿದರಂತೆ. ಉದ್ಧಾನ ಶಿವಯೋಗಿಗಳ ವ್ಯಕ್ತಿತ್ವ—ಲೇಖಕನಂತೆ ಶ್ರೀ ಕ್ಷೇತ್ರದಲ್ಲೇ ವಿದ್ಯಾರ್ಥಿಯಾಗಿದ್ದ ಶ್ರೀ ಎಂ. ಜಿ. ನಂಜುಂಡಾರಾಧ್ಯರು ಶ್ರೀಗಳನ್ನು ಕುರಿತು "ಉದ್ಧಾನ ಶಿವಯೋಗಿ" ಎಂಬ ಕಿರುಹೊತ್ತಿಗೆ ಬರೆದಿದ್ದಾರೆ. ಅದರಲ್ಲಿ ಶ್ರೀಗಳ ಹೊರಬಣ್ಣ ಚೆನ್ನಾಗಿ ರೂಪುಗೊಂಡಿದೆ. ಅವರ ಆಂತರಿಕಸತ್ವವನ್ನು ತಿಳಿದವರು ಅತಿ ವಿರಳ. ಕಾರಣ ಶ್ರೀಮದುದ್ಧಾನ ಶಿವಯೋಗಿಗಳು ಕಾರಣಪುರುಷರು ಆರು ವಜ್ರಕವಚದಲ್ಲಿ ತನ್ನ ತನುವನ್ನಡಗಿಸಿದಂತೆ ಇವರು ತಮ್ಮ ನಿಜ ಸ್ವರೂಪವನ್ನು ಋಷಿಪ್ರಪಂಚದಲ್ಲಿ ವಿಮೆ ಮಾಡಿದ್ದರು. ಆದ್ದರಿಂದ ನಾವು ಅದನ್ನು ತಿಳಿಯದೆ ತಿಳಿದಿರುವೆವೆನ್ನುವುದು ತಪ್ಪು. ಅತಿಯಾಗದೆ ಮಿತಿ ಬಿಡದೆ ರೂಪಿಸುವುದಾದರೆ ಶ್ರೀಮದುದ್ಧಾನ ಶಿವಯೋಗಿಗಳು ಮುನಿಮಾನವರು. ಪ್ರಾರಂಭದಲ್ಲಿ ಕೆಲವು ವರ್ಷ ಜಾತಿಜಾಡ್ಯದ ದುಷ್ಪರಿಣಾಮಕ್ಕಾಗಿ ಜಿಗುಪ್ಸೆಗೊಂಡು ಹೇಸಿ ಗುಹಾಂತರ್ವಾಸ ಮಾಡಿದರು. ಆದರೆ ಅಂತರ್ವಾಣಿಯ ಪ್ರೇರಣೆಯಿಂದ ಅವರು ಕರ್ಮಯೋಗದಿಂದ ದೂರವಾಗಲಿಲ್ಲ. ಜೋಳಿಗೆಯ ಮಹಾತ್ಮೆಯನ್ನು ನೋಡಬಯಸುವವರು ಶ್ರೀ ಸಿದ್ಧಗಂಗಾ ಕ್ಷೇತ್ರಕ್ಕೆ ಹೋಗಿ ಅಲ್ಲಿಯ ಖರ್ಚೇನು? ಎಂದು ನಿರ್ಮಾತ್ಸರ್ಯ ದೃಷ್ಟಿಯಿಂದ ನೋಡಿದರೆ ಆಗ ನಿಷ್ಕಪಟ ವೀರ ವಿರಕ್ತಿಯ ಬಲವೇನೆಂದು ತಿಳಿಯುವುದು. ಅಲ್ಲಿನ ಸನ್ನಿವೇಶ, ಸಂಪ್ರದಾಯಗಳು ಇನ್ನುಳಿದ ಮಠಗಳಂತಲ್ಲ ಅವರದು "ಏಕಮೇವಾದ್ವಿತೀಯ ಸಂಪ್ರದಾಯ" ಅವರದು ಒಂದು ಸಿಂಹಾಸನವೆಂದಿಲ್ಲ.

ಯಾವ ಪೀಠಕ್ಕೂ ಸೇರಿದವರಲ್ಲ. ಎಲ್ಲ ಪೀಠ ಎಲ್ಲ ಸಿಂಹಾಸನಗಳವರೂ ಬೇಕಾದಲ್ಲಿ ಬರಬಹುದು. ಬೇಡವಾದರೆ ದೂರ ಸರಿಯಬಹುದು, ತಲೆಗಂದಾಯ, ನೂರೊಂದು, ನೂರೆಂಟು, ಸಹಸ್ರ ರೂ.ಗಳರ್ಚನೆಯ ನಿರ್ಬಂಧವಿಲ್ಲ. ಕಾಸಿನಾಸೆಯವರಲ್ಲ, ಕನಕದಾಸರಲ್ಲ. ಬಡವರು ಬಲ್ಲಿದರು ಎಲ್ಲರೂ ಶಿಷ್ಯರು. ಎಲ್ಲಕ್ಕಾಗಿ, ಎಲ್ಲ ಮತದವರಿಗಾಗಿ, ಎಲ್ಲಿಂದಲಾದರೂ ಬರಲಿ ಅವರಿಗಾಗಿ. ಎರಡು ಸಾವಿರ ವಿದ್ಯಾರ್ಥಿಗಳಿಗಾಗಿ, ಬಂದು ಹೋಗುವ ಶ್ರೀ ಸಿದ್ಧಲಿಂಗನ ಯಾತ್ರಾರ್ಥಿಗಳಿಗಾಗಿ, ಆ ಕ್ಷೇತ್ರ, ಕೊಟ್ಟರೆ ಸಂತೋಷ, ಕೊಡದಿದ್ದರೆ ಪೂಜಾರಿಯ ಕ್ರೂರ ದೃಷ್ಟಿಯಿಲ್ಲ. ಬಂದರೆ ಸಂತೋಷ ಬಾರದಿದ್ದರೆ ದುಃಖ ದುಗುಡ, ದುಮ್ಮಾನಗಳಿಲ್ಲ. ಕೊಡುವವರುಂಟು. ಹೊತ್ತು ತರುವಂತಿಲ್ಲ. ಶ್ರೀಗಳು ದೇಹ ದಣಿಸಿ ಕೆಲಸ ಮಾಡುವವರು, ಶ್ರೋತ್ರಿಯರು, ಬ್ರಹ್ಮನಿಷ್ಠರು ಈಗಿರುವವರ ಶ್ರೀಗಳು ಮಾತ್ರ ವ್ಯವಹಾರ ಸಂಸ್ಥೆಗಳು, ತಾವಾಗಿ ಹೆಚ್ಚು ಬೆಳೆದಿರುವುದರಿಂದ ನಿರ್ವಾಹವಿಲ್ಲದೆ ವಿದ್ಯಾ ಖಾತೆಯಲ್ಲಿ ವ್ಯವಹಾರಿಕ ಸದ್ಯಸ್ಯತ್ವ ಪರಿಗ್ರಹಿಸಲೇ ಬೇಕಾಗಿವೆ. ಭಾಷಣದಲ್ಲಿ ಅವರು ''ನಾನು ಹೇಳುವುದೇನೆಂದರೆ'' ಎಂದು ಅಪ್ಪಣೆ ಕೊಡಿಸುವುದೇನೆಂದರೆ— ''ಇತ್ಯಾದಿ ಹೇಳುವುದಿಲ್ಲ. ಯಾರೇ ಬರಲಿ 'ಏನು ಬಂದಿರಿ, ಹದುಳವೇ ?' 'ಊಟ ಆಯಿತೆ' "ಊಟಮಾಡಿ ಬನ್ನಿ" ಇದೇ ಅಲ್ಲಿಯ ಪಂಚಾಕ್ಷರಿ, ಷಡಕ್ಷರಿಗಳು. ವಿದ್ಯಾದಾನ, ಅನ್ನದಾನಗಳೇ ಅಲ್ಲಿನ ಮುಖ್ಯೋದ್ದೇಶ, ನಿತ್ಯವೂ ಬಂದು ಹೋಗುವ ಅಮಿತ ಜನಸಂದಣಿಗೆ ಅಲ್ಲಿ ಶ್ರೀಗಳು ಅನುಗ್ರಹಿಸುವ ಭಸ್ಮ, ಯಂತ್ರಗಳು ನಂಬಿಕೆಯ ಮಹಾಮಂತ್ರದಿಂದ ಎಲ್ಲರೀತಿಯ ಆದಿವ್ಯಾಧಿಗಳಿಗೆ ದಿವ್ಯೌಷಧಗಳಾಗಿವೆ. ಗಾಳಿ, ಸೋಂಕು, ಅಪಘಾತ, ಮೂರ್ಛೆ ಇತ್ಯಾದಿ ವ್ಯಾಧಿಗಳು ಅಲ್ಲಿ ಸೇವೆ ಮಾಡುವುದರಿಂದ ಗುಣವಾಗುತ್ತವೆ. ಇದೆಲ್ಲಾ ಬಾಯಿ ಮಾತಲ್ಲ ಪೂರ್ಣಸತ್ಯ. ಈ ಸಂಸ್ಥೆಯಲ್ಲಿ ಅಲ್ಲಿನ ನಿವಾಸಿಗಳಿಂದ ಲೋಪದೋಷಗಳಿಲ್ಲವೇ ಇಲ್ಲವೆಂಬ ಅರ್ಥವಲ್ಲ. ಅವೆಲ್ಲಾ ನಾಗರೀಕತೆಯ ವೈಪರೀತ್ಯರಿಂದ ತಾತ್ಕಾಲಿಕವಾಗಿ ತಲೆದೋರಬಹುದು. ಇಂಥ ಸುಭದ್ರ ತಳಪಾಯ ಅಸ್ಖಲಿತವಾಗಿ ಬೆಳೆದಿರುವುದು ಸತ್ಯ ಶುದ್ಧ ಜೀವಿ ಸಿದ್ಧ ಪುರುಷ ಗುರು ಪರಂಪರೆಯಿಂದ. ಮೇಲಾಗಿ ಶ್ರೀ ತೋಂಟದಾರ್ಯರ ಅನುಗ್ರಹ ಬಲದಿಂದ, ಈ ನಿರಹಂಕಾರ ನಿರಾಡಂಬರ, ಮಿತಹಿತ ವೀರಶೈವ ಸತ್ಸಂಪ್ರದಾಯಗಳ ತಳಹದಿಯ ಮೇಲೆ ನಿಂತಿರುವ ಸಂಸ್ಥೆಗಳಲ್ಲಿ ಶ್ರೀ ಸಿದ್ಧಗಂಗಾ ಕ್ಷೇತ್ರವೂ ಉತ್ತಮೋತ್ತಮ ಸಂಸ್ಥೆ ಇದಕ್ಕೆ ಶ್ರೀ ಸಿದ್ಧಲಿಂಗ ಕೃಪಾಪ್ರೇರಿತರಾಗಿ ಬಂದು ಬಯಲಾದ ಶ್ರೀಮದಟವೀಂದ್ರ ಶಿವಯೋಗಿಗಳು ಹಾಗೂ ಶ್ರೀ ಉದ್ಧಾನ ಶಿವಯೋಗಿಗಳ ಕರ್ಮಧರ್ಮ ಶುದ್ಧಕಾಯಕ ಬದ್ಧ ಜೀವನವೇ ಕಾರಣ. ವೀರಶೈವರ ಪಂಚಾಚಾರ, ಷಟ್ಥಲ ಸಿದ್ಧಾಂತ ಸಮಯಗಳು ಇಲ್ಲಿ ಶೋಧಿಸಿ ಸಾಧಿಸಿ ನೋಡುವವರಿಗೆ ಸಮನ್ವಯಗೊಳ್ಳುತ್ತಿರುವುದನ್ನು ನೋಡಬಹುದು. ಶ್ರೀ ಉದ್ಧಾನಪ್ಪನವರ ಕಹಿಬಾಹ್ಯ. ಸಿಹಿ ಅಂತರಂಗ, ಗೋಪ್ಯಮುನಿಸಂಪರ್ಕ, ವಾಕ್ಸಿದ್ಧಿ, ಹಸ್ತಸಿದ್ಧಿ, ಕ್ರಿಯಾಶುದ್ಧಿ ನಿರ್ದಾಕ್ಷಿಣ್ಯ ಪ್ರವೃತ್ತಿ ನಿರಾಡಂಬರ ಜೀವನ ಮೇಲಾಗಿ ಮಹಾನುಭಾವ ಶಿವಯೋಗ ಅವರನ್ನು ಇಲ್ಲಿ ಸಲ್ಲುವಂತೆ ಮಾಡಿತು. ಅಂಥವರು ''ಅಲ್ಲಿಯೂ ಸಲ್ಲುವರು". ಅವರು ಬಾಹ್ಯಪ್ರಪಂಚವನ್ನು ಬಿಟ್ಟು ಬಯಲಾಗಿದ್ದಾರೆ. (1948ರಲ್ಲಿ) ಭಾವಿಸುವವರಿಗೆ ಇಂದು ಎಂದಿಗೂ ಅವರು ದರ್ಶನಕೊಡುವರು. ದೇವರಾಯನದುರ್ಗದ ಪರ್ವತಶ್ರೇಣಿ ಮಾವಿನಕೆರೆ ಶ್ರೀ ಸಿದ್ಧರಬೆಟ್ಟದಿಂದ ಶಿವಗಂಗಾಕ್ಷೇತ್ರ, ಕಾಚಕಲ್ಲಪ್ಪನವರ ಬೆಟ್ಟದವರೆಗೆ ಹಬ್ಬಿರುವುದು. ಅಲ್ಲಲ್ಲಿ ಋಷಿ ಕೇಂದ್ರಗಳುಂಟೆಂದು ನಂಬಲಾಗಿದೆ. ಅಲ್ಲಲ್ಲಿ ಶ್ರೀಮದುದ್ಧಾನ ಶಿವಯೋಗಿಗಳಂಥವರು ಅವರದೇ ಆದ ಒಂದು ಜೀವನ ನಡೆಸುವರು. ಹುಲಿಯ ಹಾಲು ಹುಲಿಗೆಂಬಂತೆ ಇಂಥ ಶುದ್ಧ ಸಿದ್ಧಶಿವಯೋಗಿಗಳ ಉತ್ತರಾಧಿಕಾರಿಗಳಾಗಿ ಶ್ರೀ ಶಿವಕುಮಾರ ಸ್ವಾಮಿಗಳು ಅಸಾಧಾರಣ ಸಾಧಕರೂ ಬೋಧಕರೂ ಆಗಿ ತಮ್ಮ ಸಾಧನೆ ನಿಷ್ಠೆಗಳಿಂದ ಗುರು ಪರಂಪರೆಯ ಶ್ರೇಣಿಯೇರುವುದರಲ್ಲಿ ಸಂದೇಹವೇ ಇಲ್ಲ.

''ನಂಬು ನಂಬಲೆ ಮನವೇ ಹಂಬಲಿಸದಿರು ಬರಿದೆ
ನಂಬಿಗೆಯು ಕಾರಣವು ಶ್ರೀ ಸಾಂಬನೊಲಿವುದಕೆ"



# ಎನ್ನ ನಿನ್ನ ಬಳಿ ಸೇರಿಸು



ಆಳಾಗಿಸು, ನಿನ್ನ ಪಾದದಡಿಯ ಧೂಳಾಗಿಸು
ಹೂವಾಗಿಸು ಎನ್ನ, ಗಣಪನ ಶಿರವೇರಿಸು
ಬತ್ತಿಯಾಗಿಸು, ದೀಪದ ಬೆಳಕಾಗಿಸು
ಪ್ರಭು ಮೌನವ ತೊರೆದು ನೀ ಲಾಲಿಸು || ೧ ||

ಮೊಗ್ಗಾಗಿಸು ಎನ್ನ ಅರಳು ಮೊಲ್ಲೆಯಾಗಿಸು
ಕೊಳವಾಗಿಸು ಹರಿವ ನದಿಯಾಗಿಸು
ನೆರಳಾಗಿಸು, ಎನ್ನ ಚೆಲುವ ಮರವಾಗಿಸು
ದೇವ ಕೋಪವ ತೊರೆದು ನೀ ಆಲಿಸು || ೨ ||

ಕಾಡಾಗಿಸು ಎನ್ನ ಚೆಲುವ ಬೀಡಾಗಿಸು
ಕಲ್ಲಾಗಿಸು ಶಿಲ್ಪಿ ಕೈಯ ಕಲೆಯಾಗಿಸು
ಎನ್ನ ನೀನಾಗಿಸು, ನಿನ್ನ ಬಳಿ ಸೇರಿಸು
ಕರುಣಾಳು ಇದ ನೀ ದಯಪಾಲಿಸು || ೩ ||

—" ರಜನಿ "



ಶ್ರೀ ಕ್ಷೇತ್ರದಲ್ಲಿ ನಡೆದ ಅತಿಥಿ ಗೃಹದ ಉದ್ಘಾಟನಾ ಸಮಾರಂಭದಲ್ಲಿ
ದಾನಿಗಳಾದ ಶ್ರೀ ಟಿ. ಎನ್. ಕೆಂಪಹೊನ್ನಯ್ಯನವರು ಮಾತನಾಡುತ್ತಿರುವುದು.



ಶ್ರೀ ಕ್ಷೇತ್ರದಲ್ಲಿ ಅತಿಥಿಗೃಹದ ಪ್ರಾರಂಭೋತ್ಸವವನ್ನು ನೆರವೇರಿಸಿದ ಶ್ರೀ ಎಸ್. ನಿಜಲಿಂಗಪ್ಪನವರು
ನೀಲಾಂಜನೆಗಳನ್ನು ಹಚ್ಚುತ್ತಿರುವುದು.

ವಿಶಾಲ ಮೈಸೂರಿನ ಮಾನ್ಯ ಮುಖ್ಯಮಂತ್ರಿಗಳಾದ ಶ್ರೀ ಎಸ್. ನಿಜಲಿಂಗಪ್ಪನವರು ಶ್ರೀ ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳೊಡನೆ
ತಾರೀಖು 29-6-1966ರಂದು ಪ್ರತಿದಿವಸ ಶ್ರೀ ಕ್ಷೇತ್ರದಲ್ಲಿ ನಡೆಯುವ ದಾಸೋಹವನ್ನು ವೀಕ್ಷಿಸುತ್ತಿರುವ ದೃಶ್ಯ.



ಶ್ರೀ ಕ್ಷೇತ್ರದಲ್ಲಿ ಪ್ರತಿದಿವಸ ನಡೆಯುವ ದಾಸೋಹಕ್ಕಾಗಿ ಕಾದು ಕುಳಿತಿರುವ ಜನಸ್ತೋಮ.



ತುಮಕೂರಿನ ಗಣ್ಯವರ್ತಕರಾದ ಶ್ರೀ ಟಿ ಎಳ್. ಕೆಂಪಹೊನ್ನಯ್ಯನವರು ಶ್ರೀ ಕ್ಷೇತ್ರದಲ್ಲಿ ದಾನವಾಗಿ ಕಟ್ಟಿಸಿಕೊಟ್ಟಿರುವ ಅತಿಥಿಗೃಹದ ಉದ್ಘಾಟನಾ ಸಮಾರಂಭವನ್ನು ಮುಖ್ಯಮಂತ್ರಿಗಳಾದ ಶ್ರೀ ಎಸ್. ನಿಜಲಿಂಗಪ್ಪನವರು ನೆರವೇರಿಸಿದರು.
ಎಡದಿಂದ ಬಲಕ್ಕೆ: ಶ್ರೀ ಜಿ. ನಾರಾಯಣಗೌಡರು, ಶ್ರೀ ಆರ್. ದಯಾನಂದ ಸಾಗರ್‌ರವರು, ಶ್ರೀ ಎಸ್. ನಿಜಲಿಂಗಪ್ಪನವರು, ಶ್ರೀ ಆಲೂರು ಹನುಮಂತಪ್ಪನವರು, ಶ್ರೀ ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳವರು, ಶ್ರೀ ಎಂ. ವಿ. ರಾಮರಾವ್‌ರವರು, ದಾನಿಗಳಾದ ಶ್ರೀ ಟಿ. ಎಳ್. ಕೆಂಪಹೊನ್ನಯ್ಯನವರು.



ಅತಿಥಿ ಗೃಹದ ಉದ್ಘಾಟನ ಸಮಾರಂಭದಲ್ಲಿ ಭಾಗವಹಿಸಿದ್ದ ಲೋಕಸೇವಾನಿರತ ಶ್ರೀ ಜಿ. ಎಂ. ಸಿದ್ದರಾಮಣ್ಣನವರು ಮುಖ್ಯಮಂತ್ರಿಗಳಿಗೆ ಪುಷ್ಪವನ್ನು ಅರ್ಪಿಸುತ್ತಿರುವುದು
ಎಡದಿಂದ ಬಲಕ್ಕೆ: ಶ್ರೀ ಜಿ ಎಂ. ಸಿದ್ದರಾಮಣ್ಣನವರು, ಶ್ರೀ ಎಸ್. ನಿಜಲಿಂಗಪ್ಪನವರು, ಶ್ರೀ ಆಲೂರು ಹನುಮಂತಪ್ಪನವರು, ಶ್ರೀ ಟಿ. ಪಿ. ಕೃಷ್ಣಪ್ಪನವರು, ಶ್ರೀ ಟಿ. ಪಿ ಬ್ರಹ್ಮಯ್ಯನವರು

# ಈಶೋಪನಿಷತ್ ದರ್ಶನ

ಪಕ್ಷಿನೋಟ

ಪೀಠಿಕೆ



ಉಪನಿಷತ್ತುಗಳೂ ವೇದಗಳೂ ಎಲ್ಲವೂ ಹೇಳುವುದು ಒಂದೇ. ಅದೇ ಮಾನವನ ಪರಿಪೂರ್ಣ ವಿಕಾಸಕ್ಕೆ ಮಾರ್ಗ. ಈ ಪರಿಪೂರ್ಣತೆಯು ಈ ಜಗತ್ತಿನಲ್ಲಿಯೇ ಪಡೆಯಬೇಕು. ಅದರಿಂದಲೇ ಸುಖ, ಅದರಿಂದಲೇ ಶಾಂತಿ. ಎಲ್ಲಾ ವೇದಶಾಸ್ತ್ರಜ್ಞರೂ ಇದನ್ನು ಬಹುಮತವಾಗಿ ಒಪ್ಪುತ್ತಾರೆ. ''ಇಷ್ಟಪ್ರಾಪ್ತಿ ಅನಿಷ್ಟ ಪರಿಹಾರವೋ । ಯೋ ಗ್ರಂಥೊ ವೇದಯೇತಿ ಸವೇದ ।" ಎಂಬುದನ್ನೂ ಎಲ್ಲಾ ಆಚಾರ್ಯರು ಒಪ್ಪುತ್ತಾರೆ. ಅಂದಮೇಲೆ ಈ ವೇದೋಪನಿಷತ್ತುಗಳಿಂದ ನಮ್ಮ ಕಷ್ಟಕ್ಲೇಶಗಳೂ ನಿವಾರಣೆಯಾಗಬೇಕು. ನಮ್ಮ ಲಕ್ಷ್ಯಕ್ಕೆ ದಾರಿದೋರಬೇಕು. ಈ ದೃಷ್ಟಿಯಿಂದ ಈ ಸಣ್ಣ ಈಶೋಪನಿಷತ್ತು ಮಹತ್ತರವಾದದ್ದು. ಸಕ್ರಿಯಾತ್ಮಕ ಸಚೇತನವಾದ ಈ ಉಪನಿಷತ್ತಿನ ಪ್ರತಿಮಂತ್ರದಲ್ಲಿ ಮಾನವನಿಗೆ ಹೊಸ ತೇಜವನ್ನು ತೋರುವ ಶಕ್ತಿಯಿದೆ. ಮಾನವನ ಮನಸ್ಸು ವಿಕಸಿಸಿ ಪರಿಪೂರ್ಣತೆಗೆ ತೋರುವ ಕೈದೀವಿಗೆ ಇದು. ಜೀವನ ಸರ್ವಾಂಗಸುಂದರವಾದರೆ ಮಾತ್ರ ಮಾ ನ ವ ನಿ ಗೆ ಮಾನವತ್ವ ಕಳೆಯೇರಿ ಬರುವುದು

ಮತ್ತೊಂದು ಅತಿಶಯವಾದ ವಿಚಾರ ಈ ಉಪನಿಷತ್ತಿನಲ್ಲಿ ತರ್ಕವಿಚಾರವೂ ಇದೆ, ಅದರ ಪ್ರಯೋಗ ಮಾರ್ಗವೂ ನಿರೂಪಿಸಿದೆ. ಬರೀ ತರ್ಕವಿದ್ದು ಉಚಿತ ಪ್ರಯೋಗವಿಲ್ಲದಿದ್ದರೆ ಅದು 'ಪುಸ್ತಕದ ಬದನೇಕಾಯಿ' ಆದೀತು ತರ್ಕದ ಆಧಾರವಿಲ್ಲದಿದ್ದರೆ ಪ್ರಯೋಗ ಸರಿಯಾಗಿ ಮುಂದುವರಿಯದು ಶ್ರದ್ಧಾಸಕ್ತಿಗಳು ಹುಟ್ಟಲು ಶ್ರವಣ ಮನನ ಬೇಕು. ನಂತರವೇ ''ನಿದಿಧ್ಯಾಸಿತವ್ಯಃ" ಆದುದರಿಂದ ನಮ್ಮ ನಿಯತವಾದ ಕರ್ಮಗಳನ್ನು ಮಾಡಲೇಬೇಕು. ''ಕುರ್ವನ್ನೇಹ ಕರ್ಮಾಣಿ" (ಈಶ. 2). ಕರ್ಮಾನುಷ್ಠಾನದಿಂದ ಬುದ್ಧಿಯೂ ತೀಕ್ಷ್ಣವಾಗುವುದು. ಮುಂದಕ್ಕೆ ತಾನೇ ದಾರಿ ಕಂಡುಬರುವುದು. ತೋಟಗಾರನು ತನ್ನ ತೋಟದಲ್ಲಿ ಕೆಲಸ ಮಾಡುವ ಹಾಗೆ. ಯಾವುದನ್ನೂ ಯೋಚಿಸದೆ, ಕಾಲಕಾಲಕ್ಕೆ ತನ್ನ ಗಿಡಗಳಿಗೆ ಗೊಬ್ಬರ ನೀರು ಕೊಟ್ಟು, ಕಳೆಯನ್ನು ತೆಗೆಯುತ್ತಾನೆ. ನಂತರ ಸ್ವಾಭಾವಿಕವಾಗಿಯೇ ಗಿಡಗಳು ಹೂವು ಕೊಟ್ಟು, ಹಣ್ಣುಗಳು ಕಾಣಿಸುವುದು. ಹಾಗೆಯೇ ಕರ್ಮಗಳಿಂದ ಮನಸ್ಸು ಪರಿಪಕ್ವವಾದಂತೆಲ್ಲಾ, ಸತತವಾದ ಅಭ್ಯಾಸಬಲದಿಂದ ತಾನಾಗಿಯೇ ಫಲಪ್ರಾಪ್ತಿಯಾಗುವುದು – ಅಥವಾ ಮೋಕ್ಷಪ್ರಾಪ್ತಿಯಾಗುವುದು.

ಇನ್ನೊಂದು ವಿಶೇಷಣ ಈ ಈಶೋಪನಿಷತ್ತಿನಲ್ಲಿ ಜಗತ್ತಿನ ಸಮಸ್ತರಿಗೂ ಅನ್ವಯವಾಗುವುದು ಇದು. ಎಲ್ಲಾ ಕಾಲಗಳಲ್ಲಿಯೂ, ಎಲ್ಲಾ ದೇಶದವರೂ ಇದರಲ್ಲಿ ಕಂಡುಬರುವ, ನಿರೂಪಿಸಿರುವ ತತ್ವಗಳನ್ನು ಅಭ್ಯಸಿಸಿ ಪರಮಾರ್ಥವನ್ನು ಪಡೆಯಬಹುದು. ಸಾಯುಜ್ಯವೋ, ಸಾಮೀಪ್ಯವೋ, ಸಾರೂಪ್ಯವೋ ಇವುಗಳ ಹವ್ಯಾಸ ಸಧ್ಯಕ್ಕೆ ನಮಗೆ ಬೇಡ. ಮುಖ್ಯವಾಗಿ ಜೀವನ ಉತ್ತಮವಾಗಬೇಕು. ಬಾಳು ಬದುಕು ಹಸನಾಗಬೇಕು. ಜಾತಿ ಕುಲ ಮತ ಇವುಗಳ ಆತಂಕವೇ ಇಲ್ಲ. ಈ ಉಪನಿಷತ್ತು ತನ್ನ ಅಭ್ಯಾಸಿಗಳಲ್ಲಿ ಇಚ್ಛಿಸುವುದು ಇಷ್ಟೇ. ತಮಗೆ ಉತ್ತಮ (ಭವಿಷ್ಯ) ಜೀವನ ಸಾಧ್ಯ. ಅದಕ್ಕೆ ಬೇಕಾಗಿರುವುದು ಸಾಧನ ಪ್ರತಿಜ್ಞೆ.



## ಪಕ್ಷಿನೋಟ - ಈಶೋಪನಿಷತ್ ದರ್ಶನ

ಎಲ್ಲಾ ಉಪನಿಷತ್ತುಗಳಿಗಿಂತಲೂ ಹದಿನೆಂಟೇ ಮಂತ್ರಗಳುಳ್ಳ ಈ ಈಶಾವಾಸ್ಯೋಪನಿಷತ್ತಿಗೆ ಬಹು ಹೆಚ್ಚಿನ ಪ್ರಾಶಸ್ತ್ಯವಿದೆ. ಸಂಹಿತಾಭಾಗವಾಗಿರುವುದರಿಂದ ಇದಕ್ಕೆ ಸಂಹಿತೋಪನಿಷತ್, ಮಂತ್ರೋಪನಿಷತ್ತು ಎಂಬ ಹೆಸರುಗಳೂ ಇವೆ. ಇದರ ಮಹತ್ವ ಇದರ ಹೆಸರಿನ ಮೊದಲನೆಯ ಪದದಿಂದಲೇ ಸೂಚಿತವಾಗಿದೆ, ಹಾಗೂ ಇದರ ವ್ಯಾಪ್ತಿಯು ಇದೇ ಪದದಿಂದ ಉಪಲಬ್ಧವಾಗುತ್ತದೆ.

ಈ ಉಪನಿಷತ್ತುಗಳೇ ಭಾರತೀಯರ ಜೀವನಾಡಿಯೆಂದು ಎಲ್ಲರೂ ಒಪ್ಪಿರುವ ಮಾತು. ಇದೇ ದೇಶವನ್ನು ಜನರನ್ನು ಪಾವನಮಾಡಿರುವ ಸ್ರೋತ. ಬಾಳಿಗೆ ಬೆಳಕನ್ನು ತೋರಿರುವ, ತೋರುವ ಜ್ಯೋತಿಸ್ತಂಭ. ಆದುದರಿಂದಲೇ ಈ ಉಪನಿಷತ್ತುಗಳು ಭಾರತೀಯರ ದೈನಂದಿಕ ಜೀವನದಲ್ಲಿ ಹಾಸುಹೊಕ್ಕಾಗಿವೆ. ಇದರಿಂದಲೇ ಸುಖ, ಶಾಂತಿ, ಕಲ್ಯಾಣಗಳು-ಮತ್ಯಾವುದರಿಂದಲೂ ಇಲ್ಲ. ಇದು ಈ ಉಪನಿಷತ್ತುಗಳ ಘೋಷಣೆ. ಪ್ರತಿದಿನವೂ ಸ್ನಾನಮಾಡಿ ದೇಹದ ಕೊಳೆಯನ್ನು ತೊಳೆದುಕೊಳ್ಳುವಂತೆ ಈ ಉಪನಿಷತ್ತುಗಳನ್ನು ಸ್ಮರಿಸಿ, ಅಧ್ಯಯನಮಾಡಿ ಮನಸ್ಸಿನ ಕೊಳೆಯನ್ನು ನಿರ್ಮೂಲಮಾಡಿಕೊಳ್ಳಬೇಕೆಂಬುದೇ ಈ ಉಪನಿಷತ್ತುಗಳ ಸಾರಸತ್ವ. ಅಂದರೆ ಇದರ ಅಧ್ಯಯನದಿಂದ ಜೀವನ ವಿಕಾಸವಾಗಬೇಕು, ಬಾಳು ಬೆಳಗಬೇಕು ದೈಹಿಕವಾಗಿ, ಮಾನಸಿಕವಾಗಿ, ಹಾರ್ದಿಕವಾಗಿ ಪರಿಪೂರ್ಣತೆಯನ್ನು ಪಡೆಯಲು ದಾರಿ ತೋರುವ ವಿದ್ಯೆಯೇ ಈ ಉಪನಿಷತ್ತುಗಳ ಅಂತರ್ಗತ ಸಾರ. ಪ್ರತಿದಿನದಲ್ಲಿಯು ಜೀವನದಲ್ಲಿ ಆಚಾರ ವ್ಯವಹಾರಗಳ ಪಥವನ್ನು ತೋರುವ ದಿಕ್ಸೂಚಿ ಇದು. ಜನರಿಗೆ ಶ್ರೇಯೋಮಾರ್ಗವನ್ನು ತೋರುವ ಸಾಧನ ಸಂಪತ್ತು ಇದು. ಬಾಳನ್ನು ರಸಮಯವಾಗಿ ಮಾಡುವುದು ಇದು. ಈ ಉಪನಿಷದ್ವಿದ್ಯೆಯು ಬಾಹ್ಯಜೀವನಕ್ಕೂ, ಆಂತರಿಕ ಜೀವನಕ್ಕೂ ಸಮಸಮವಾಗಿ ಗಮನವನ್ನು ಕೊಟ್ಟು ವ್ಯಕ್ತಿಯನ್ನು ಪರಿಪೂರ್ಣವನ್ನಾಗಿ ಮಾಡಲು ಇಚ್ಛಿಸುವುದು. ಅಥವಾ ವೈದಿಕ ಪರಿಭಾಷೆಯಲ್ಲಿ ಹೇಳುವುದಾದರೆ, ಚತುರ್ವಿಧ ಪುರುಷಾರ್ಥಗಳಿಗೆ, ಅದರ ಪ್ರಾಪ್ತಿಗೆ ಪ್ರೇರಕವಾಗಿರುವುದು ಈ ಉಪನಿಷದ್ವಿದ್ಯೆ. ಅಂದರೆ ನಡೆಗೂ ನುಡಿಗೂ ಹೆಚ್ಚು ಪ್ರಾಶಸ್ತ್ಯವನ್ನು ಕೊಟ್ಟಿದ್ದಾರೆ. ಉಪನಿಷತ್ತಿನ ಮಂತ್ರದ್ರಷ್ಟಾರರು, ಋಷಿಗಳು, ಮತ್ತೊಂದು ವಿಷಯವನ್ನೂ ಗಮನದಲ್ಲಿಡುವುದು ಅಗತ್ಯವೆಂದು ಕಾಣಬರುತ್ತದೆ. ಒಳ್ಳೆಯ ಬಾಳನ್ನು, ಉದಾತ್ತ ಬಾಳನ್ನು ಇಲ್ಲಿ ಇಹಲೋಕದಲ್ಲಿ ಬದುಕಬೇಕು. ಶರೀರವು ನಶಿಸುವ ಮೊದಲೇ, ಅಂದರೆ ಈ ಲೋಕದಲ್ಲಿ ಬದುಕಿರುವಾಗಲೇ ಮಾನವನು ಸುಖಿಯಾಗಿರಬೇಕೆಂದು ಶ್ರೀ ಕೃಷ್ಣನು ಭಗವದ್ಗೀತೆಯಲ್ಲಿ ಹೇಳಿರುವನು :

> ''ಶಕ್ನೋತೀಹೈವ ಯಃ ಸೋಢುಂ ಪ್ರಾಕ್
> ಶರೀರ ವಿಮೋಕ್ಷಣಾತ್ ||
> ಕಾಮಕ್ರೋಧೋದ್ಭವಂ ವೇಗಂ ಸಯುಕ್ತಃ
> ಸಸುಖೀ ನರಃ" [ಗೀತಾ 5-23]

ಈ ಮಾತುಗಳು ಕೇವಲ ವಾದಾತ್ಮಕ ವಾಕ್ಯಗಳಾಗದೆ, ಸಚೇತನ ಸಕ್ರಿಯಾ ವಾಕ್ಯಗಳಾಗಿವೆ. ಈ ಋಷಿಗಳು ಕೇವಲ ''ನೇತಿ ನೇತಿ" ಎನ್ನದೆ ''ಇತಿ ಇತಿ" ಎಂದೂ ಪಥವನ್ನು ಸುಗಮವಾಗಿ ಮಾಡಿದ್ದಾರೆ. ಇಂದು ಈ ಹೊಸ ವೈಜ್ಞಾನಿಕ ಯುಗದಲ್ಲಿಯೂ, ಹೊಸ ಸಂಶೋಧನೆಗಳು ನಡೆದು ಮಾನವನು ದೈಹಿಕವಾಗಿ, ಮಾನಸಿಕವಾಗಿ ವಿಕಾಸವನ್ನು ಹೊಂದಿದ್ದರೂ ಅವನಲ್ಲಿ ಶಾಂತಿ, ಸುಖಗಳ ಛಾಯೆಯೂ ಕಾಣುತ್ತಿಲ್ಲ. ಇದರ ಮೂಲಕಾರಣ ಮಾನವನ ನೈತಿಕಮಟ್ಟ, ಆತ್ಮವಿಕಾಸ ಸಮಸಮನಾಗಿ ಬೆಳೆದಿಲ್ಲವೆಂಬುವೇ ಪೂರ್ವ ಪಾಶ್ಚಾತ್ಯ ತತ್ವಜ್ಞಾನಿಗಳ, ವೈಜ್ಞಾನಿಕರ ಅಭಿಪ್ರಾಯವಾಗಿದೆ. ಇಂದು ತಂತ್ರ, ಯಂತ್ರಗಳ ಯುಗ. ಆದರೆ ಮಾನವನು ಬೆಳೆದಂತೆ ಯಂತ್ರಗಳು ಬೆಳೆಯುವುದಿಲ್ಲ. ಯಂತ್ರವು ಕೆಟ್ಟಿತೆಂದರೆ ಅದು ಮಾನವನ ಸಕ್ರಿಯೆಯಿಲ್ಲದಿದ್ದರೆ ಪುನಃ ಚಲಿಸದು. ಜೀವಂತ ಮನುಷ್ಯನ ಕೈಯಲ್ಲಿ ಸ್ವಲ್ಪವೇ ವ್ರಣವಾದರೂ ಯಾವುದೋ ಅನಿರ್ವಚನೀಯ ಶಕ್ತಿಯ ಪ್ರಭಾವದಿಂದ ಅದು ಗುಣವಾಗುವುದು. ಯಂತ್ರಕ್ಕೆ ಈ ಸ್ವಶಕ್ತಿಯಿಲ್ಲ. ಆದರೆ ಇಂದು ಮಾನವನು ತನ್ನ ಪಾಶವೀ ವೃತ್ತಿಗಳನ್ನು

ಕೈಬಿಡದೆ ಕೇವಲ"ಯಂತ್ರ"ವಾಗಿಬಾಳುತ್ತಿದ್ದಾನೆ. ಆದುದರಿಂದಲೇ "Is man a machine" ಎಂದು ಅಮೆರಿಕದ ಪ್ರಸಿದ್ಧ ತತ್ವಜ್ಞಾನಿ [will durant] ಉದ್ಗಾರ ವಾಕ್ಯವನ್ನೆತ್ತಿದ್ದಾರೆ. ಮಾನವನಿಗೆ ಅಗತ್ಯ ಬೇಕಾಗಿರುವುದು ಶಾಂತಿ, ಪುಷ್ಟಿ, ತುಷ್ಟಿ, ಸುಖ. ಇವುಗಳ ಕಡೆಗೇ ಅವನನ್ನು ಈ ಉಪನಿಷತ್ತುಗಳೂ ಎಳೆದೊಯ್ಯುವುವು.

ಮಂತ್ರ ೧

ಈಶಾವಾಸ್ಯಮಿದಂ ಸರ್ವಂ ಯತ್ಕಿಂಚ ಜಗತ್ಯಾಂಜಗತ್ |
ತೇನತ್ಯಕ್ತೇನ ಭುಂಜೀತಾ ಮಾಗೃಧಃ ಕಸಸ್ವಿದ್ಧನಂ ||

ಭಾರತೀಯರ ಸಂಸ್ಕೃತಿ ಸದಾಚಾರ ಸಾರಸತ್ವಗಳೆಲ್ಲವೂ ಈ ಮೊದಲನೆಯ ಮಂತ್ರದಲ್ಲಿ ಅಡಗಿದೆ. ಈ ಮಂತ್ರದಿಂದ ಮುಗ್ಧರಾದ ಗಾಂಧೀಜಿಯವರು ಈ ರೀತಿ ಹೇಳಿದರು : ಸನಾತನ ಹಿಂದೂಧರ್ಮದ ಎಲ್ಲಾ ಪುಸ್ತಕಗಳನ್ನು ಸಮುದ್ರಕ್ಕೆ ಬಿಸುಟು, ಈ ಒಂದೇ ಮಂತ್ರವನ್ನುಳಿಸಿಕೊಂಡರೆ ಹಿಂದೂಧರ್ಮಕ್ಕೆ ಚ್ಯುತಿಯಿಲ್ಲ—ಅದು ಶಾಶ್ವತನಾಗಿರುತ್ತದೆ. ಈ ಜಗತ್ತೆಲ್ಲವೂ ಈಶ್ವರಮಯ. ವ್ಯಕ್ತಾವ್ಯಕ್ತ ಚರಾಚರ ವಸ್ತುಗಳೆಲ್ಲವೂ ಈಶ್ವರಾಚ್ಛಾಧಿತವಾಗಿರುವುದು. ಈ ಮಂತ್ರದ ಋಷಿ ಈಶ್ವರ ಸರ್ವವ್ಯಾಪಿ ಎಂದು ಹೇಳಿ ಸುಮ್ಮನಾಗಲಿಲ್ಲ. ಎಲ್ಲವೂ ಈಶ್ವರನಿಂದಲೇ ಸ್ಥಾಪಿತವಾದ ಮೇಲೆ ಎಲ್ಲೆಲ್ಲಿಯೂ ಅವನು ಇರಲೇಬೇಕು. [ಹೃದ್ದೇಶೇ ಅರ್ಜುನ ತಿಷ್ಠತಿ-ಗೀತೆ 18-61] ಹಾಗೆಂದ ಮೇಲೆ ವಿಶ್ವಸೋದರ ಭಾವನೆಗಳು ಈ ಮಂತ್ರದಲ್ಲಿ ಗೂಢವಾಗಿ ಅಂಕುರಿಸುತ್ತವೆ ಎಂದರೆ ತಪ್ಪಾಗಲಾರದು. ತ್ಯಾಗ ಸೇವಾಭಾವನೆಗಳು ಈ ಮಂತ್ರದಲ್ಲಿ ಗೋಚರವಾಗುವುದು. ಮಾನವನ ಕಾರ್ಯವೆಲ್ಲವೂ ಈಶ್ವರಾರ್ಪಣವೆ ಸರಿ. ಸ್ವಂತ ಇಚ್ಛೆಗೆ ಸ್ಥಳವೇ ಇಲ್ಲ. ಈ self-will ಅದರ ತ್ಯಾಗವೇ ಈ ಬದುಕಿನ ಬಂಡವಾಳ. "If any one wish to come after me, let him deny himself Mathew xvi-24. ಅಂದ ಮೇಲೆ ಪರಧನದ ಮೇಲೆ ಆಸೆಯಾದರು ಎಲ್ಲಿ. ಈ ಮಂತ್ರಸಿದ್ಧಿಯಾದವರೇ ಭಾಗ್ಯಶಾಲಿಗಳು. "Lord of himself, though not of lands. And having nothing, yet, hath all" -Horace. ಈ ಮಂತ್ರ ಸಿದ್ಧಿಯಾದವನೇ ನಿಜವಾದ ಅಂತರ್ಸುಖಿ, ಅಂತರಾರಾಮಃ ಅವನಿಗೇ ನಿಜವಾದ ಜ್ಯೋತಿಯ ದರುಶನವಾಗುವುದು. ಎಲ್ಲೆಲ್ಲಿಯೂ ಈಶ್ವರದರ್ಶನವಾಗುವುದರಿಂದ—ಅಂತರದಲ್ಲಿ, ಬಾಹ್ಯದಲ್ಲಿ—ಒಂದು ನವೀನ ಸಾಮ್ಯತೆಯ ಅವಶ್ಯಕತೆ ತಾನಾಗಿ ಈ ಸಿದ್ಧನಲ್ಲಿ ಆವಿರ್ಭವಿಸುವುದು. ಮತ್ತೊಂದು ದೃಷ್ಟಿಯಿಂದ ಜ್ಞಾನ ಕರ್ಮಸಮುಚ್ಚಯ ಈ ಮಂತ್ರದಿಂದ ಜಿನುಗುವುದು.

"We ascend to the heights of Contemplation by the Steps of active life." St. Gregory-Morals on Job xxxi-102.

ಈ ಈಶಾವಾಸ್ಯಬುದ್ಧಿಯು ಸಿದ್ಧಿಯಾದ ತಕ್ಷಣವೇ ಎರಡನೆಯ ಮಂತ್ರವು ತಾನಾಗಿ ಅರಳುವುದು.

ಮಂತ್ರ ೨.

ಕುರ್ವನ್ನೆವೇದ ಕರ್ಮಾಣಿ ಜಿಜೀವಿಷೇಚ್ಛತಂ ಸಮಾಃ |
ಏವಂ ತ್ವಯಿ ನಾನ್ಯಥೇತೋಽಸ್ತಿ ನಕರ್ಮ ಅಪ್ಸತೆನರೇ ||

ಮಾನವ ಜೀವಂತನಾಗಿರುವವರೆಗೂ ದೇಹಬುದ್ಧಿಯು ಇರುತ್ತದೆ. ಎಲ್ಲವೂ ಈಶ್ವರನೇ ಆಗಿರುವುದರಿಂದ, ಎಲ್ಲಾ ಕೆಲಸಗಳು ಈಶ್ವರಾರ್ಪಣವೇ ಸರಿ. ಅಂದಮೇಲೆ ಕರ್ಮಬಂಧನಾಗುವುದಿಲ್ಲ. ಅರ್ಥಾಥ್, ಅವಶ್ಯ ಬೇಕಾಗಿರುವುದು. ಕರ್ಮತ್ಯಾಗವಲ್ಲ—ಮಾನಸಿಕ ಪರಿವರ್ತನೆ. ಜೀವವಿರುವರೆಗೂ ತನಗೆ ನಿಯಮಿತವಾದ ಕೆಲಸಗಳನ್ನು ಮಾಡುತ್ತಲೇ ಇರುತ್ತಾನೆ. ಅದನ್ನು ಬಿಟ್ಟರೆ ಕೇವಲ ಲೋಭ ದೋಷವಾದೀತು.

"The way of True Freedom is not abstention from action but conversion of spirit"—Dr. Radhakrishnan.

"Wisdom is beautiful but barren without work."--St. James II-26.

ಈ ಮಂತ್ರಸಿದ್ಧನು ವಾಸ್ತವವಾಗಿಯೂ "ಶಾರೀರಂ ಕೇವಲಂ ಕರ್ಮ ಕುರ್ವನ್ನಾಪ್ನೋತಿ ಕಿಲ್ಬಿಷಂ" (ಗೀತಾ 4-21). ಆದುದರಿಂದಲೇ ಶ್ರೀಕೃಷ್ಣನ ವಾಕ್ಯವು ಹೀಗಿರುವುದು: ಮಾತೇ ಸಂಗೋಽಸ್ತ್ವ ಕರ್ಮಣಿ-2-47. ತನ್ನ ನಿಯತ ಕರ್ಮಗಳನ್ನು ಮಾಡುತ್ತಿರುವ ಸಾಧಕನಿಗೆ ಈಶ್ವರಪ್ರೇರೇಪಣೆಯಿಂದ ಎಲ್ಲವೂ ತಾನಾಗಿಯೇ ಒದಗಿಬರುವುದು. "ಯದೃಚ್ಛಾ ಲಾಭ ಸಂತುಷ್ಟಃ" (ಗೀತಾ 4-22) ನಾಗುತ್ತಾನೆ. ಇಂತವನಿಗೆ ಮಾಗೃಧಃ ಕಸ್ಯಸ್ವಿದ್ಧನಂ. ಇತರ ಧನವನ್ನು ಅಪೇಕ್ಷಿಸುವ ಪ್ರಸಂಗವೇ ಇಲ್ಲ.

ಇವನೇ ನಿತ್ಯತೃಪ್ತ, ನಿರಾಶ್ರಯನು, ವಿಮತ್ಸರನು, ಮುಕ್ತ. ಇವನೇ ಗೀತೆಯ "ಪದ್ಮಪತ್ರಮಿವಾಂಭಸಾ" ಎಲ್ಲೆಲ್ಲಿಯೂ ಈಶ್ವರನ ಪ್ರತಿಬಿಂಬವೇ ಇವನಿಗೆ ಕಾಣುವುದು. ಅಂದಮೇಲೆ ವೈರವೆಲ್ಲಿಯದು? ಯಾರಮೇಲೆ ವೈರಮಾಡಬೇಕು? ತನ್ನ ಕೆಲಸವೆಲ್ಲವೂ ಈಶಪ್ರೇರೇಪಣೆಯೆಂದು ಅರಿವಾಗುತ್ತದೆ.

ಶ್ರೀ ಪರಮಹಂಸ ರಾಮಕೃಷ್ಣರು ತಮ್ಮ ಸುಂದರ ಸರಳಭಾಷೆಯಲ್ಲಿ ಇದನ್ನೇ ಈ ರೀತಿ ಹೇಳುತ್ತಿದ್ದರು. "ಆಮಿ ಜಂತ್ರ, ತುಮಿಜಂತ್ರೀ' "ನಾನು ಕೇವಲ ಯಂತ್ರ, ಯಂತ್ರಚಾಲಕ ನೀನು". ಗೀತೆಯ "ಯಂತ್ರಾರೂಢಾನಿ ಮಾಯಯಾ" ಎಂಬುದು ಸ್ಮರಣೆಗೆ ಬರುವುದು. ಈ ಯೋಗಿಗೆ ಮೋಹವೆಲ್ಲಿಯದು! (18-61).

"ನಪುನಃ ಮೋಹಂ ಯಾಸ್ಯಸಿ" (ಗೀತೆ 4-35) ಹೀಗೆ ಮಾಡದೆ ಕರ್ಮಾಸಕ್ತನಾಗಿ ಕರ್ಮ ಮಾಡಿದರೆ ಅವನು ಲೋಕಬದ್ಧನಾಗುತ್ತಾನೆ. ಲೋಕವು ಕತ್ತಲೆಯಾಗುತ್ತದೆ. "ಅಂಧೇನ ತಮಸಾವೃತಾಃ" ಹೀಗೆ ಮೂರನೇ ಮಂತ್ರಕ್ಕೆ ಸ್ವಾಭಾವಿಕವಾಗಿ ಬರುತ್ತದೆ.

ಮಂತ್ರ 3

ಅಸುರ್ಯಾ ನಾಮ ತೇ ಲೋಕಾ ಅಂಧೇನಾ
ತಮಸಾವೃತಾಃ |
ತಾಂಸ್ತೇ ಪ್ರೇತ್ಯಾಭಿಗಚ್ಛಂತಿ ಯೇಕೇ
ಚಾತ್ಮಹನೋ ಜನಾಃ ||

ಮೇಲಿನ (2ನೇ) ಶ್ಲೋಕದಲ್ಲಿ ಬದುಕಿರುವವರೆಗೂ ಕರ್ಮವನ್ನು ಮಾಡಲೇಬೇಕೆಂದು ತಿಳಿಸಿದೆ. ಆದರೆ "ಗಹನಾ ಕರ್ಮಣೋಗತಿ" (ಗೀತಾ 4-17). ಅಂದಮೇಲೆ ವಿಚಾರ ಪೂರಿತವಾಗಿ, ವಿಮರ್ಶಾತ್ಮಕವಾಗಿಯೇ ಕೆಲಸವನ್ನು ಮಾಡಬೇಕು. ಸರಿಯಾದ ವಿವೇಚನೆಯಿಂದ ಸರಿಯಾದ ಕೆಲಸವನ್ನು ಸರಿಯಾದ ರೀತಿಯಲ್ಲಿಯೇ ಮಾಡಬೇಕು. "ಯೋಗಃ ಕರ್ಮಸು ಕೌಶಲಂ" ಎಂಬ ಗೀತಾ ವಾಕ್ಯ ಪುಷ್ಟಿಯೂ ಇದೆ. ಅದು ಬಿಟ್ಟು ಅನ್ಯಥಾ ಮಾಡಿದರೆ ಕರ್ಮಬದ್ಧನಾಗಿ ಲೋಕಪಾಶಕ್ಕೆ ಒಳಗಾಗುವನು. ಗೀತೆಯ 3-9ರಂತೆ ಸ್ವಾರ್ಥಪರ ಕರ್ಮಗಳು ಕರ್ಮಬಂಧನ ಕಾರಣ. ಮುಕ್ತನಾಗಲು ಇಚ್ಛಿಸಿದವನು ಬ್ರಹ್ಮಾರ್ಪಣ ಬುದ್ಧಿಯಿಂದಲೇ ಕರ್ಮವನ್ನು ಮಾಡಬೇಕು ಇಲ್ಲದಿದ್ದರೆ ತಮಸ್ಸಿನಿಂದ ಕೂಡಿ ಅಜ್ಞಾನಿಯಾಗುವುದು. ಇದರಿಂದ ಆತ್ಮಘಾತುಕವಾಗುತ್ತದೆ. ಜ್ಞಾನಿಗೆ ನಿತ್ಯಾನಿತ್ಯವಸ್ತು ವಿವೇಕವಿರುವುದರಿಂದ, ಈ ಕ್ಷಣಿಕ ಸುಖಗಳಿಂದ ತೃಪ್ತನಾಗುವುದಿಲ್ಲ. ಅವುಗಳಿಂದ ಸಾವೇ ನಿಶ್ಚಯವೆಂದು ಅವನಿಗೆ ಅರಿವಾಗಿರುತ್ತದೆ. ಆದುದರಿಂದಲೇ ನಚಿಕೇತನು ಯಮನು ಕೊಟ್ಟವರಗಳೆಲ್ಲವನ್ನೂ ತೃಣೀಕರಿಸಿ, ಯುಕ್ತನಾಗಿ, ಬುದ್ಧಿವಂತನಾಗಿ ಶ್ರೇಯೋಮಾರ್ಗವನ್ನೇ ಆರಿಸುವನು. "ಶ್ರೇಯೋ ಹಿ ಧೀರೋಽಭಿ ಪ್ರೇಯಸೋ ವೃಣೀತೆ. ಪ್ರೇಯೋ ಮಂದೋ ಯೋಗಕ್ಷೇಮಾತ್ ವೃಣೀತೇ" (ಕಠ 1-2-2) ಮಂದಬುದ್ಧಿಯಿಂದ, ತಮಸಾವೃತನಾಗಿ, ಪಾಶವೀಕೃತ್ಯಗಳನ್ನು ಮಾಡಿ, ಆತ್ಮಹತನಾಗುವನು. ರಾಮಕೃಷ್ಣರು ಹೇಳುವಂತೆ ನೀರು ನೀರೇ ಆದರೆ ಕೆಲವು ಕುಡಿಯಲು ಯೋಗ್ಯವು ಮತ್ತೆ ಕೆಲವು ವ್ಯವಸಾಯಕ್ಕೆ ಯೋಗ್ಯವು. ಮತ್ತೆ ಕೆಲವು ಬೇರೆ ಕೆಲಸಗಳಿಗೆ ಯೋಗ್ಯವು. ತಿಳುವಳಿಕೆಯಿಂದ ನೀರನ್ನು ವಿಂಗಡಿಸಿ ತನಗೆ ಬೇಕಾದಂತೆ ಉಪಯೋಗಿಸಿಕೊಳ್ಳಬೇಕು. ಇಲ್ಲದಿದ್ದರೆ ಕಠೋಪನಿಷತ್ತಿನ "ದಂದ್ರಮ್ಯಮಾಣಾಃ ಪರಿಯಂತಿ ಮೂಢಾಃ" ಎಂಬಂತೆ ಮೂಢನಾಗಿ ಲೋಕಪಾಶಕ್ಕೆ ಗುರಿಯಾಗುವನು ಪಕ್ಷಿನೋಟದಿಂದ ನೋಡುವುದಾದರೆ ಈ ಮಂತ್ರದಲ್ಲಿ ಮನುಷ್ಯನಿಗೆ ಮಾತ್ರ ಮೀಸಲಾಗಿರುವ ವಿವೇಕ ಸ್ವಾತಂತ್ರ್ಯದ ಕುರುಹು ನಿರೂಪಿಸಲ್ಪಟ್ಟಿದೆ ಪ್ರಸ್ತುತಃ ನಮಗೆಲ್ಲಾ ಬೇಕಾಗಿರುವುದು ವಾದ ವಿವಾದಾಸ್ಪದ

ತರ್ಕ ಪ್ರಶ್ನೆಗಳಲ್ಲ. ಸಾಮಾನ್ಯ ಜನರಿಗೆ ಅವಶ್ಯಕವಾಗಿ ಬೇಕಾಗಿರುವುದು ಲೌಕಿಕ ಕರ್ಮ, ಧರ್ಮ. ದೇಹ ವಿರುವವರೆಗೂ "ನಹಿ ಕಶ್ಚಿರ್ ಕ್ಷಣಮಪಿ" (ಗೀತಾ 4.1) ಎಂದು ಒಪ್ಪಿದಮೇಲೆ ಕರ್ಮವು ಅನಿವಾರ್ಯವೇ ಸರಿ. ಆದರೆ ಅದೇ ಕರ್ಮವನ್ನು ಉಚಿತ ಅನುಚಿತ ಗಳನ್ನರಿತು ಬ್ರಹ್ಮಾರ್ಪಣ ಬುದ್ಧಿಯಿಂದ, "ಯಜ್ಞಾ ರ್ಥಾತ್ ಕರ್ಮಣಃ ಅನ್ಯತ್ರ ಲೋಕೋಽಯಂ ಕರ್ಮ ಬಂಧನಃ" (ಗೀತಾ3-9) ಎಂಬುದನ್ನು ಸ್ಮರಣೆಯಲ್ಲಿಟ್ಟು ಇರುವ ಸ್ವಾತಂತ್ರ್ಯದಲ್ಲಿ ವಿವೇಕ ವಿಚಾರಯುಕ್ತನಾಗಿ ನಡೆಸಿ ಮುಕ್ತನಾಗಬೇಕು ಇದರಿಂದಲೇ ಶ್ರೀಕೃಷ್ಣನು "ಶ್ರೇಯಾನ್ ಸ್ವಧರ್ಮೋ ವಿಗುಣಃ" (ಗೀತಾ 3.35) ಎಂದು ಹೇಳಿ ಸ್ವಧರ್ಮವನ್ನು ಹೇಳಿದನು. ಹೀಗೆ ಮಾನವನು ತನ್ನ ಸಹಜ ಸ್ವಭಾವಗಳಿಗನುಗುಣವಾ ಗಿರುವ ತನ್ನ ಸ್ವಧರ್ಮಮಾರ್ಗವನ್ನು ಬಿಟ್ಟರೆ ಅದು ಆತ್ಮಘಾತುಕತನವೆ ಸರಿ. ಅದು "ಭಯಾವಹಃ" ಅದು ಅಜ್ಞಾನ ಜನಕ. ತಮಸ್ಸಿಗೆ ಎಳೆದೊಯ್ದು ಅಂಧ ಕೂಪಕ್ಕೆ - ಅರ್ಥಾತ್ ಲೋಕಪಾಶಕ್ಕೆ - ತಳ್ಳುವುದು. ಅಂದರೆ ಕರ್ತವ್ಯ ಲೋಪದೋಷದಿಂದ ಬಿಡಲ್ಪಟ್ಟು ಅಮೃತತ್ವವನ್ನು ಪಡೆಯುಬೇಕೆಂಬುದೇ-ಆ ಮಾರ್ಗವನ್ನು ತೋರಿಸುವುದೇ ಈ ಮಂತ್ರದ ಸಾರವೆಂದರೆ ಬಹುಶಃ ತಪ್ಪಾಗಲಾರದು.

ಮಂತ್ರ 4

ಅನೇಜದೇಕಂ ಮನಸೋ ಜವೀಯೋ
ನೈನದ್ದೇವಾ ಆಪ್ನುವನ್ಪೂರ್ವಮರ್ಶತ್ ।
ತದ್ಧಾವತೋಽನ್ಯಾನತ್ಯೇತಿ ತಿಷ್ಠತ್ತಸ್ಮಿನ್ನಪೋ
ಮಾತರಿಶ್ವಾದ ಧಾತಿ ॥

ಮಂತ್ರ 5

ತದೇಜತಿ ತನ್ನೈಜತಿ ತದ್ದೂರೇ ತದ್ವಂತಿಕೇ ।
ತದಂತರಸ್ಯ ಸರ್ವಸ್ಯಾಸ್ಯ ಬಾಹ್ಯತಃ ॥

ಮಂತ್ರ 6

ಯಸ್ತು ಸರ್ವಾಣಿ ಭೂತಾನ್ಯಾತ್ಮನ್ಯೇವಾನೇ
ಪಶ್ಯತಿ ।
ಸರ್ವ ಭೂತೇಷು ಚಾತ್ಮಾನಂ
ತತೋನವಿಜುಗುಪ್ಸತೆ ॥

ಮಂತ್ರ 7

ಯಸ್ಮಿನ್ಸರ್ವಾಣಿ ಭೂತಾನ್ಯಾತ್ಮೈವಾಭೂದ್ವಿ
ಜಾನತಃ ।
ತತ್ರಕೋಮೋಹಃ ಕಃ ಶೋಕಃ ಏಕತ್ವಮನು
ಪಶ್ಯತಃ ॥

ಮಂತ್ರ 8

ಸಪರ್ಯಗಾಚ್ಛುಕ್ರಮಕಾಯಮವ್ರಣಮ
ಸ್ನಾವಿರಂ ಶುದ್ಧಮ ಪಾಪವಿದ್ಧಮ್ ।
ಕವಿರ್ಮನೀಷಿ ಪರಿಭೂಃ ಸ್ವಯಂಭೂರ್ಯಾಥಾ
ತಥ್ಯತೋಽರ್ಥಾನ್ವ್ಯದಧಾತ್ ಶಾಶ್ವತೀಭ್ಯಃ
ಸಮಾಭ್ಯಃ ॥

ಈ ಮೇಲಿನ ಐದು ಮಂತ್ರಗಳಲ್ಲಿ ಆ ವಿಶ್ವದೊಡೆಯನ ವಿಶ್ವವ್ಯಾಪಿತ್ವವನ್ನು ಮತ್ತು ಅನುಭವಾತೀತ ಅಚಿಂತ್ಯತ್ವ ವನ್ನೂ ವಿವರಿಸುತ್ತ. (Immanent and Transcendental aspects).

ಎಲ್ಲಾ ಆಚಾರ್ಯರು ಜಗದೀಶ್ವರನ ಅಸ್ತಿತ್ವವನ್ನು ಒಪ್ಪುವರು. ಈ ಚರಾಚರ ಪ್ರಪಂಚವೆಲ್ಲವೂ ಅವನ ಸೃಷ್ಟಿಯೇ. "ಯತೋ ವಾ ಇಮಾನಿ ಭೂತಾನಿ ಜಾಯಂತೆ, ಯೇನ ಜಾತಾನಿ ಜೀವಂತಿ, ಯತ್ ಪ್ರಯಂತಿ ಅಭಿಸಂವಿಶಂತೀತಿ—ತದ್ ಬ್ರಹ್ಮೇತಿ" (ತೈತ್ತಿ-3-1-1). ಹಾಗೂ ಪ್ರಸಿದ್ಧ ಪುರುಷಸೂಕ್ತದ ಮೊದಲನೆಯ ಮಂತ್ರವನ್ನು ಸ್ಮರಿಸಬಹುದು "ಸಹಸ್ರ ಶೀರ್ಷಾ ಪುರುಷಃ ಸಹಸ್ರಾಕ್ಷಃ ಸಹಸ್ರಪಾತ್ | ಸಭೂ ಮಿಂ ವಿಶ್ವತೋ ವೃತ್ವಾ...." ಮತ್ತು "ಏತಾವಾನಸ್ಯ ಮಹಿಮಾ" ಇತ್ಯಾದಿ ಶ್ರುತಿವಾಕ್ಯಗಳ ಪ್ರಕಾರ ಈಶ್ವರನ ಸರ್ವವ್ಯಾಪಿತ್ವವು ಸ್ವಯಂ ಸಿದ್ಧವಾಗುವುದು, ದೃಶ್ಯಾ ದೃಶ್ಯ ಪ್ರಪಂಚದಲ್ಲಿ, ಎಲ್ಲವೂ ಈಶಾವಾಸ್ಯವೇ ಆಗಿರು ವುದರಿಂದ ಎಲ್ಲದರಲ್ಲಿಯೂ ಅವನ ಇರುವಿಕೆಯು ಸ್ವಯಂ ಸಿದ್ಧವೇಸರಿ. ಈ ಆತ್ಮಶಕ್ತಿಯಿಂದಲೇ ಎಲ್ಲದರ ಚಲನ ವಲನವು. ಆ ಶಕ್ತಿಯಿಲ್ಲದಿದ್ದರೆ ಎಲ್ಲವೂ ಅಚೇತನ. ಅಕ್ರಿಯವಾಗುವುವು. ಅದರಿಂದಲೇ ಶ್ರೀಕೃಷ್ಣನು "ಮಯಿಸರ್ವಮಿದಂ ಪ್ರೋತಂಸೂತ್ರೇ ಮಣಿಗಣಾ ಇವ" (ಗೀತೆ 7-7) ಎಂದು ಹೇಳಿದನು. ಹಾಗೂ ಶೃತಿ ಪ್ರಮಾಣದಂತೆ, "ಭೀಷಾಸ್ಮಾದ್ ವಾತಃ ಪವತೆ"

ಇತ್ಯಾದಿ, ಈ ಪರಮಾತ ಶಕ್ತಿಯಿಂದಲೇ ಈ ಚರಾಚರ ಜಗತ್ತೇ ನಡೆಯುತ್ತಿರುವುದು.

" ಯಥಾ ಪೃಥಿವ್ಯಾಂ ಓಷಧಯಃ ಸಂತು " ಇತ್ಯಾದಿ ಶೃತಿಪ್ರಮಾಣಗಳಿಂದ ಆ ಆತ್ಮಶಕ್ತಿಯ ಪ್ರಭಾವ ಚೆನ್ನಾಗಿ ತಿಳಿಯುವುದು. ಅಂದಮೇಲೆ ಇವನು ಸರ್ವಾಂತರ್ಯಾಮಿಯೇ ಸರಿ. ಈ ಸಂದರ್ಭದಲ್ಲಿ " ಊರ್ಧ್ವಶ್ಚ ನಾರಾಯಣಃ, ಅಧಶ್ಚನಾರಾಯಣಃ, ಅಂತರ್ಬಹಿಶ್ಚ ನಾರಾಯಣಃ (ನಾರಾಯಣೋಪನಿಷತ್) ಈ ಮಂತ್ರಗಳನ್ನೂ ಸ್ಮರಿಸಿಕೊಳ್ಳಬಹುದು.

ಹೀಗೆ ಎಲ್ಲದರಲ್ಲಿಯೂ, ಆಪರಮಾತ್ಮನು ಇರುವನು ಎಂದು ಅರಿವಾದವನಿಗೆ ಶೋಕಶೋಕ ಹಾಗೂ ಮೋಹ ಎಲ್ಲಿಯದು? ಮೋಹವಿಲ್ಲದಿದ್ದಮೇಲೆ ಶೋಕವೆಲ್ಲಿಂದ ಬರಬೇಕು. ಇವನದೇ ಸ್ಥಿರಶಾಂತಿ. ಅದೇ ಬ್ರಾಹ್ಮೀ ಸ್ಥಿತಿ. ಅದನ್ನೇ ಶ್ರೀಕೃಷ್ಣನು ಅರ್ಜುನನಿಗೆ ಹೇಳಿರುವುದು. " ಅಶಾಂತ್ಯಸ್ಯ ಕುತ: ಸುಖಂ" (ಗೀತೆ2-66 ಅಂದಮೇಲೆ ಈ " ಏಕತ್ವವು " ತಾನಾಗಿಯೇ ಪ್ರಕಟಿತವಾಗುವುದು. ಆದುದರಿಂದಲೇ ಸ್ವಾಮಿ ವಿವೇಕಾನಂದರು ಈ ರೀತಿ ಹೇಳಿದರು. " To the yogi everything is bliss, every human face he sees brings cheerfulness to him"
ayoga 2-41) ಎಲ್ಲವೂ ಈ ಆತ್ಮಶಕ್ತಿಯ ಕಧಾರೆ. ಈ ಸ್ವಾತ್ಮಾನುಭವವಾದಮೇಲೆ ಈ ಸಿದ್ಧನಿಗೆ " ಸಂತೋಷಾದನುತ್ತಮಸುಖಲಾಭಃ " (ರಾಜಯೋಗ 2-42) ಆಗುವುದು. ಇದು ಪ್ರಾಪ್ತವಾದಮೇಲೆ " ಆತ್ಮಾರಾಮೋಭವತಿ " ಪುಮಾನ್ ಸಿದ್ಧೋಭವತಿ, ಅಮೃತೋಭವತಿ, ತೃಪ್ತೋಭವತಿ (ನಾರದ ಭಕ್ತಿಸೂತ್ರ 4-5) ಅನುಭವಗಳ ಪರಾಕಾಷ್ಟೆಯನ್ನು ಹತ್ತುವನು. ಸೂಫಿ ಭಕ್ತನೊಬ್ಬನು ಈ ರೀತಿ ಹೇಳಿದನು I am Thyself; Then Shall we rise from the angels and merge in the nameless. When he attains perfection, he is neither for nor near neither Stranger nor intimate, neither separate nor united. ಹಾಗೂ St. Paul ಹೇಳಿದಂತೆ " The best is one with god."

ಇಂತಹ ಸಾಧಕನಿಗೆ ವಿಭೇದವನ್ನು ಕಾಣಲು ಸಾಧ್ಯವೇ ಇಲ್ಲ. ಹಾಗೆ ಕಂಡರೆ ದೋಷಯುಕ್ತವಾದೀತು. 'ಅತ್ರ ವಿಭೇದ ಯೋಗೇ ಮಹಾದೋಷ' ಎಂಬ ಭಗವದಾಜ್ಞೆಯೂ ಇರುವುದು. "ತದೇಜತಿ, ತನ್ನೈಜತಿ, ತದ್ದೂರೇತದ್ವಂತಿ" ಇತ್ಯಾದಿ ಪದಗಳು ದೂರದ ನೋಟಕ್ಕೆ ವಿರೋಧಾಭಾಸಕಗಳಾಗಿ ಕಂಡುಬಂದರೂ, ವಾಸ್ತವಕ್ಕೂ ಇವುಗಳರ್ಥ. ಈಶ್ವರನು ಸರ್ವವ್ಯಾಪಿ. ಪರಮಹಂಸ ಶ್ರೀ ರಾಮಕೃಷ್ಣರು ಹೇಳಿರುವಂತೆ ಇದು ಚಿಮ್ಮಣಿಯೊಳಗಿರುವ ದೀಪದಂತೆ. ಮುಟ್ಟಲು ಸಿಗುವುದಿಲ್ಲ, ಆದರೆ ಅದರ ಪ್ರಕಾಶ ಮಾತ್ರ ಎಲ್ಲರಿಗೂ ಅರಿವಾಗುವುದು. ಹಾಗೆಯೇ ಈಶ್ವರನೂ ಸಹ ನಮ್ಮ ಹೃದಯ ಕಂದರದಲ್ಲಿದ್ದರೂ ಸಿಗನು. ಚಿಮ್ಮಣಿಯ ಗಾಜು ಅಜ್ಞಾನದ ತೆರೆಯಿರುವುದರಿಂದ.

" ಏಕೋ ದೇವಃ, ಸರ್ವಭೂತೇಷು ಗೂಢಃ, ಸರ್ವ ವ್ಯಾಪೀ ಸರ್ವ ಭೂತಾಂತರಾತ್ಮಾ | " ಮತ್ತು "ಬಹುಕಾಮೇಕಂ ಬೀಜಂ ಬಹುಧಾಯಃ ಕರೋತಿ ||" ಎಂಬ ಶೃತಿಪ್ರಮಾಣದ ಪುಷ್ಟಿ ವಾಕ್ಯಗಳೂ ಇವೆ. ಇದನ್ನು ಅನುಭವಿಸಿದವನೇ ಧೀರ. ಅವನಿಗೇ ಸುಖ, ಶಾಂತಿ. "ತಮಾತ್ಮಸ್ಥಂ ಯೇಽ ನುಪಶ್ಯಂತಿ ಧೀರಾಸ್ತೇಷಾಂ ಸುಖಂ ಶಾಶ್ವತಂ, ನೇತರೇಷಾಂ" ಎಂಬ ಉಪನಿಷತ್ತಿನ ಸ್ಪಷ್ಟ ಮಾತುಗಳ ಪೋಷಣೆಯಿವೆ. ಶ್ರೀ ಕೃಷ್ಣನ ಗೀತಾ ವಾಕ್ಯಗಳನ್ನು ಸ್ಮರಿಸಿಕೊಳ್ಳಬಹುದು. "ಯೋಮಾಂ ಪಶ್ಯತಿ ಸರ್ವತ್ರ ಸರ್ವಂಚಮಯಿ ಪಶ್ಯತಿ" ಹಾಗೆಯೇ ಸಮುದ್ರವೋ, ಅದರ ತರಂಗವೋ ಯಾವುದಾದರೂ ಸರಿ, ಎರಡರಲ್ಲಿಯೂ ಇರುವ ವಸ್ತುವೊಂದೇ. ಅದೇ ರೀತಿಯಲ್ಲಿ ಈ ಪರಬ್ರಹ್ಮನು ಸಾಕಾರನೂ ಹೌದು ನಿರಾಕಾರನೂ ಹೌದು, ಗುಣಮಯನೂ ಸರಿ, ಗುಣಾತೀತನೂ ಸರಿ, ಅವಶ್ಯವಾಗಿ ಅವನು ಸರ್ವವ್ಯಾಪಿ, ಸರ್ವಾಧಾರ. ನೀರಿನಲ್ಲಿ ನೀರುಬೆರೆದಂತೆ, ಬೆಂಕಿಯಲ್ಲಿ ಅದರ ಶಾಖವಿರುವಂತೆ ಹಾಲಿನಲ್ಲಿ ಬಿಳುಪಿರುವಂತೆ ಈ ಈಶ್ವರ ಎಲ್ಲದರ ಹಾಸುಹೊಕ್ಕು. ಇದರ ಅನುಭಾವಿಗೇ ಸುಖ, ಶಾಂತ, ಅವನದೇ ಬ್ರಾಹ್ಮೀಸ್ಥಿತಿ.

**ಮುಂದಿನ ಆರು ಮಂತ್ರಗಳು**

ಮಂತ್ರ 9 ಅಂಧಂ ತಮಃ ಪ್ರವಿಶಂತಿ ಯೇಽ
ವಿದ್ಯಾಮು ಪಾಸತೇ |
ತತೋಭೂಯ ಇವತೇ ತಮೋಯ
ಉ ವಿದ್ಯಾಯಾಂ ರತಾಃ ||

ಮಂತ್ರ 10 ಅನ್ಯದೇವಾಹುರ್ವಿದ್ಯಯಾನ್ಯದಾಹು
ರವಿದ್ಯಯಾ ।
ಇತಿಶುಶ್ರುಮ ಧೀರಾಣಾಂ ಯೇನಸ್ತ
ದ್ವಿಚಚಕ್ಷಿರೇ ॥
ಮಂತ್ರ 11 ವಿದ್ಯಾಂಚಾವಿದ್ಯಾಂ ಚಯಸ್ತದ್ವೇದೋ
ಭಯಂ ಸಹ ।
ಅವಿದ್ಯಾಯಯಾ ಮೃತ್ಯಂ ತೀರ್ತ್ವಾ
ವಿದ್ಯಾಯಯಾಮೃತಮಶ್ನುತೆ ॥
ಮಂತ್ರ 12 ಅಂಧಂ ತಮಃ ಪ್ರವಿಶಂತಿ ಯೇऽ
ಸಂಭೂತಿ ಮುಪಾಸತೇ ।
ತತೋ ಭೂಯಃ ಇವತೇ ತಮೋಯ
ಉ ಸಂಭೂತ್ಯಾಂ ರತಾಃ ॥
ಮಂತ್ರಿ 13 ಅನ್ಯದೇವಾಹುಃ ಸಂಭವಾ ದನ್ಯದಾಹುರ
ಸಂಭವಾತ್ ।
ಇತಿಶುಶ್ರುಮ ಧೀರಾಣಾಂ ಯೇನ
ದ್ವಿಚಚಕ್ಷಿರೇ ॥
ಮಂತ್ರ 14 ಸಂಭೂತಿಂಚ ವಿನಾಶಂಚ
ಯಸ್ತದ್ವೇದೋಭಯಂ ಸಹ ।
ವಿನಾಶೇನ ಮೃತ್ಯುಂ ತೀರ್ತ್ವಾ
ಸಂಭೂತ್ಯಾ ಮೃತಮಶ್ನುತೇ ॥

ಈ ಮಂತ್ರಗಳು ನಿಜಕ್ಕೂ ಬಹು ತೊಡಕು. ಆದರಿಂದಿಲೇ ಅನೇಕರು ಅನೇಕ ದೃಷ್ಟಿಗಳಿಂದ ಬಿನ್ನಾಭಿಪ್ರಾಯಗಳನ್ನು ಹೊರಗೆಡವಿದ್ದಾರೆ. ತೊಡಕನ್ನು ತೋರಿರುವ ಪದಗಳೆಂದರೆ ಸ್ಥೂಲವಾಗಿ ವಿದ್ಯೆ ಅವಿದ್ಯೆ, ಸಂಭೂತಿ ಅಸಂಭೂತಿ, ವಿನಾಶ (ಮೃತ್ಯು) ಅಮೃತತ್ವ.

ಎಲ್ಲಾ ವೇದೋಪನಿಷತ್ತುಗಳ ಗುರಿಯೂ "ಸ್ವಸ್ವರೂಪಾನು ಸಂಧಾನವೇ ಆಗಿದೆ. ಮೇಲಿನ ಮಂತ್ರಗಳಂತೆ ಆ ಪರಬ್ರಹ್ಮನು ಗುಣಮಯ ಗುಣಾತೀತ, ಸಾಕಾರಿ ನಿರಾಕಾರಿ, ಒಳಗೂ ಹೊರಗೂ, ಹತ್ತಿರಿದಲ್ಲೂ ದೂರದಲ್ಲೂ. ಅಪ್ತನೂ ಅಲಿಪ್ತನೂ ಇರುವನು ಎಂದು ವಿವರಿಸಿರುವಾಗ ಅವನನ್ನು ಸಾಕ್ಷಾತ್ಕಾರಮಾಡಿಕೊಳ್ಳುವುದು ಹೇಗೆ? ಈ ಪ್ರಶ್ನೆಯು ಸಹಜವಾಗಿ ಮುಂದೆ ಬರುವುದು. ಪರಮಾತ್ಮನ ನಿಜಸ್ವರೂಪವು ತಿಳಿಯುವವರೆಗೂ ಫಲಪ್ರಾಪ್ತಿಯಾಗುವುದಿಲ್ಲ. ಇದರ ಸಂಧಾನು ಮಾರ್ಗವೇ ಈ ಮಂತ್ರಗಳಲ್ಲಿ ನಿರೂಪಿಸಿರುವುದು. ವಾದ ವಿವಾದ ತರ್ಕ ಇತ್ಯಾದಿಗಳಿಗೆ ಎಡೆಕೊಡದೆ ರಾಮಕೃಷ್ಣಪರಮಹಂಸರು ಹೇಳಿದರು : "ಎಷ್ಟು ಜನರೋ ಅಷ್ಟು ಪಥ" ಎಂದು. ಅವಶ್ಯಕವಾಗಿ ಆಗಬೇಕಾದದ್ದು "ತಪಸಾ ಕಲ್ಮಶಂ ಹಂತಿ" ಕರ್ಮ ಮಾರ್ಗವಾದರೂ ಸರಿ, ಭಕ್ತಿ ಮಾರ್ಗವಾದರೂ ಸರಿ, ಜ್ಞಾನ ಮಾರ್ಗವಾದರೂ ಸರಿ, ಯೋಗ ಮಾರ್ಗವಾದರೂ ಸರಿ, ಹೃದಯ ಕಲ್ಮಶವು ಮಾಯವಾದರೆ, ಎಲ್ಲಾ ಹೃದಯ ಗ್ರಂಥಿಗಳು ನಾಶವಾಗಿ ಸ್ವಸ್ವರೂಪ ಪ್ರಕಾಶವಾಗುವುದು. ಉತ್ಸುಕತೆಯಿದ್ದರೆ ಮಾರ್ಗ ತಾನೇ ಕಂಡು ಬರುವುದು. ಅನಿರ್ವಚನೀಯ ಪ್ರೋತ್ಸಾಹ ಒದಗಿಬರುವುದು. ಪರಮಹಂಸರು ತಾವು ಸಾಧನೆ ಮಾಡುತ್ತಿದ್ದ ಕಾಲದಲ್ಲಿ ತಮ್ಮ ದೇಹದಿಂದ ಕರಾಳರೂಪಿ ವ್ಯಕ್ತಿಯೊಬ್ಬ ಹೊರಗೆ ಬಂದು ತಮ್ಮನ್ನು ಸರಿಯಾದ ಮಾರ್ಗಕ್ಕೆ ಅಟ್ಟುತ್ತಿದ್ದರೆಂದು ಹೇಳುತ್ತಿದ್ದರು. ಅಂದರೆ ಉತ್ಸಾಹ, ಅದಕ್ಕೆ ತಕ್ಕಂತೆ ವ್ಯವಸಾಯಬೇಕು ಈ ಸಾಕ್ಷಾತ್ಕಾರಕ್ಕೆ ಭಂಗಿಯ ಅಮಲೇರಿ ಅದರ ಸುಖ ಪ್ರಾಪ್ತವಾಗಬೇಕಾದರೆ, ಭಂಗಿಯನ್ನು ಯಥಾವತ್ತಾಗಿ ಕುಟ್ಟಿ, ನೀರಿನಲ್ಲಿ ಶೋಧಿಸಿ ಸಾಕಷ್ಟು ಪ್ರಮಾಣದಲ್ಲಿ ಕುಡಿದರೆ ಅದರ ಸುಖಪ್ರಾಪ್ತಿ. ಹಾಗೆಯೇ "ಸಾಧನ ಕರನಾ ಚಾಹಿಯೇ ಮಾನವಾ" ಎನ್ನುವಂತೆ ಸಾಧಿಸಿದರೆ ಮಾತ್ರ ಈಶ್ವರ ಪ್ರಾಪ್ತಿ, ಲಭ್ಯ.

ಈ ಮೇಲೆ ಸೂಚಿಸಿರುವ ಪದಗಳ ವ್ಯಾಪ್ತಿ ಬಹು ದೂರ, ಬಹುಕ್ಲಿಷ್ಟ, ಆದರೆ ಪರಮಹಂಸರ ಮಾತುಗಳನ್ನು ಉದಹರಿಸಿ ತಿಳಿಯುವುದಾದರೆ, ಪ್ರಾಯಶಃ ಅನುಷ್ಠಾನಕ್ಕೆ ತರಲು ಸಾಧ್ಯವಾಗಬಹುದು. ಒಂದು ಮುಳ್ಳಿನಿಂದ ಮತ್ತೊಂದು ಮುಳ್ಳನ್ನು ಹೊರತೆಗೆದು, ಕೊನೆಗೆ ಎರಡನ್ನೂ ಬಿಸುಟು ನೋವಿನಿಂದ ಪಾರಾಗುವ ಬಗೆ ಉತ್ತಮವೇ ಸರಿ. ಹಾಗೆಯೇ ವಿದ್ಯೆ ಅವಿದ್ಯೆ. ಸಂಭೂತಿ ಅಸಂಭೂತಿ, ಕರ್ಮಜ್ಞಾನ, ಇತ್ಯಾದಿ ದ್ವಂದ್ವಗಳನ್ನು ಅವುಗಳ ಅಧಿಕಾರ ವ್ಯಾಪ್ತಿಯನ್ನು ಮೀರಬೇಕು. ಆದುದರಿಂದಲೇ ಪರಮಹಂಸರು ತಮ್ಮ ದೇವಿಯಲ್ಲಿ ಹೃದಯಾಕುಲ ಪೂರಿತರಾಗಿ ಪ್ರಾರ್ಥಿಸುತ್ತಿದ್ದರು : "ಅಮ್ಮ ಇಗೋ ನಿನ್ನ ವಿದ್ಯೆ, ಇಗೋ ನಿನ್ನ ಅವಿದ್ಯೆ, ಇವೆರಡನ್ನೂ ನೀನೇ ತೆಗೆದುಕೋ, ನನಗೆ ನಿನ್ನ ನಿಜ ಸ್ವರೂಪವನ್ನು ಮಾತ್ರ ತೋರು" ಎಂದು.

ಆಚಾರ್ಯರೆಲ್ಲರೂ ಮುಕ್ತರೇ ಸರಿ. ಅದು ನಿರ್ವಿವಾದ. ಮನೆಯ ಮಾಳಿಗೆಗೆ ಏರಿ ಹೋಗಲು, ಸಿಮೆಂಟಿನ ಸೋಪಾನ ಮಾರ್ಗದಲ್ಲಿ ಹೋಗಬಹುದು, ಬೊಂಬಿನ ಏಣಿಯಿಂದ ಹತ್ತಬಹುದು, ಕಡೆಗೆ ಹಗ್ಗದ

ಆಸರೆಯಿಂದಲೂ ಹತ್ತಬಹುದು. ಉಪ್ಪರಿಗೆಗೆ ಏರುವುದು ಅವಶ್ಯ. ಅದೇ ರೀತಿಯಲ್ಲಿ ಮೋಕ್ಷವೂ ಕೂಡಾ ಯಾವ ಮಾರ್ಗವಾದರೂ ಸರಿ, ಬ್ರಹ್ಮಸಾಕ್ಷಾತ್ಕಾರವಾಗಿ ಮೋಕ್ಷ ಪ್ರಾಪ್ತಿಯಾಗಬೇಕು. "ಸ್ವಾರಾಜ್ಯಮದಿಗಚ್ಛತಿ" ಆಗಬೇಕು ಮಾನವನಿಗೆ.

ಪ್ರಾಯಶಃ ಈ ಸಮನ್ವಯವೆ ಈ ಮಂತ್ರಗಳ ಈ ಉಪನಿಷತ್ತಿನ ಸಾರಸತ್ವವೆಂದರೆ ತಪ್ಪಾಗಲಾರದು. ದೂರದ ನೋಟಕ್ಕೆ ಪರಸ್ಪರ ಭಿನ್ನಾಭಿಪ್ರಾಯಗಳು ಕಂಡರೂ, ಸೂಕ್ಷ್ಮಅವಗಾಹನೆಯಲ್ಲಿ ಈ ಸಮನ್ವಯವೇ ಕಂಡುಬರುವುದು. ಅಥವಾ ಪ್ರಸಿದ್ಧ ಪಂಡಿತ Max Muller ಹೇಳುವಂತೆ, "Its object is after all to impart knowledge of the highest and not to inculcate merely a difference between faith in the ordinary gods and goods works"— ಸಾಮರಸ್ಯ ದೃಷ್ಟಿಯೇ ಮುಖ್ಯ. ತಿಳುವಳಿಕೆ, ಸದಾಚಾರ ಇವುಗಳ ಸಮನ್ವಯವೇ ಅತ್ಯಗತ್ಯ. ಇವುಗಳಲ್ಲಿ ಬೇಧವನ್ನು ಕಾಣುವವರು—ವಿದ್ಯೆ ಅವಿದ್ಯೆ, ಸಂಭೂತಿ, ಅಸಂಭೂತಿ, ಅಂದರೆ ವ್ಯಕ್ತ ಅವ್ಯಕ್ತ, ಜ್ಞಾನಕರ್ಮ-ಅಂಧಂತಮಸ್ಸಿಗೆ ಹೋಗುವರು. ಬರೀ ಕರ್ಮವಿದ್ದರೆ ಸಾಲದು, ಬರೀಜ್ಞಾನವಿದ್ದರೂ ಸಾಲದು.ಪರಸ್ಪರಕೂಡುವಿಕೆಯಿಂದ ಜೀವನ ರಸಮಯವಾಗಬೇಕು. ಇದೇ ಬಾಳಿನ ಹಣತೆ. ಈ ದೀಪವು ಪ್ರಕಾಶವಾದರೆ ಕತ್ತಲೆ ಮಾಯವಾಗುವುದು. ಒಂದೇ ಬತ್ತದ ಕಾಳಿನಿಂದ 'ತೆನೆತೆನೆಯಾಗಿ' ಬತ್ತವು ಆಗುವ ಹಾಗೆ ಜೀವನ, ಬಾಳು ವಿಕಾಸವಾಗುವುದು.

ಕೊನೆಯ ಐದು ಮಂತ್ರಗಳು ಪ್ರಾರ್ಥನಾರೂಪದಲ್ಲಿವೆ.

ಮಂತ್ರ 15. ಹಿರಣ್ಮಯೇನ ಪಾತ್ರೇಣ ಸತ್ಯಸ್ಯಾಪಿಹಿತಂ
ಮುಖಮ್।
ತತ್ವಂ ಪೂಷನ್ನಪಾವೃಣು ಸತ್ಯಧರ್ಮಾಯ
ದೃಷ್ಟಯೆ॥

ಮಂತ್ರ 16. ಪೂಷನ್ ಏಕರ್ಷೇ ಯಮಸೂರ್ಯ
ಪ್ರಾಜಾಪತ್ಯ ವ್ಯೂಹರಶ್ಮೀನ್ಸಮೂಹ।
ತೇಜೋಯತ್ತೇರೂಪಂ ಕಲ್ಯಾಣತಮಂ
ತತ್ತೇಪಶ್ಯಾಮಿಯೋಸೋಽವಸೌ
ಪುರುಷಃ ಸೋಽಹಮಸ್ಮಿ॥

ಮಂತ್ರ 17. ವಾಯುರನಿಲಮ ಮೃತಮಥೇದಂ
ಭಸ್ಮಾಂತಂ ಶರೀರಮ್
ಓಂಕ್ರತೋಸ್ಮರ ಕೃತಂಸ್ಮರ ಕ್ರತೋಸ್ಮರ
ಕೃತಂಸ್ಮರ॥

ಮಂತ್ರ 18 ಅಗ್ನೇನಯ ಸುಪಥಾ ರಾಯೇ ಅಸ್ಮಾನಿ
ವಿಶ್ವಾನಿ ದೇವ ವಯುನಾನಿ ವಿದ್ವಾನ್
ಯುಯೋಧ್ಯಸ್ಮಜ್ಜುಹುರಾಣಮೇನೋ
ಭೂಯಿಷ್ಠಾಂತೇ ನಮಉಕ್ತಿವಿಧೇಮ॥

ಉದಯದ ಮುಂಬೆಳಗಿನ ರಂಗು ಮೋಹಜನಕ. ಈ ಮೋಹವಶರಾದ ಜನರು ಆ ಸೂರ್ಯನನ್ನೇ ಮರೆತಾರು. ಹಾಗೆಯೇ ಇಂದ್ರಿಯಗಳು ಜನರನ್ನು ಮೋಹಪಾಶದಿಂದ ಬಿಗಿದು ಸತ್ಯವನ್ನು ಮರೆಮಾಚಿಸುವುದು. ಮೂರು ಗುಣಗಳಿಂದ ಆವೃತವಾದ ಪ್ರಕೃತಿಯು ಆ ಸತ್ಯದ ನಿಜಸ್ವರೂಪವನ್ನು ಮರೆಮಾಚಿಸುವುದು. ಸತ್ಯಾನ್ವೇಷಣೆಗಳಿಗೆ ಅವಶ್ಯ ಈ ಸತ್ಯದ ಗೋಚರ. ಅತೀಂದ್ರಿಯನನ್ನು ನೋಡಬೇಕಾದರೆ ಇಂದ್ರಿಯಾತೀತನಾಗಬೇಕು. ಆದುದರಿಂದ ಸಾಧಕನ ಈ ಪ್ರಾರ್ಥನೆ ಎಷ್ಟು ಮೃದುವಾಗಿದೆ! ಆ ಪುರುಷ ತೇಜೋಮಯ, ರೂಪಮಯ, ಕಲ್ಯಾಣತಮ. ಈ ಅಸದೃಶ ರೂಪದರ್ಶನವಾಗಬೇಕಾದರೆ ಇರುವುದು ಒಂದೇ ಮಾರ್ಗ. ಮೇಲಿನ ಹೊದ್ದಿಕೆಯನ್ನು ಕಿತ್ತೊಗೆಯಬೇಕು. ಕಾಮಕಾಂಚನವೇ ರಂಗುರಂಗಿನ ಹೊದ್ದಿಕೆ. ಆದುದರಿಂದಲೇ ಆ ಕೇವಲ ಬಾಲಕ ನಚಿಕೇತನೂ ಕೂಡಾ "ನವಿತ್ತೇನ ತರ್ಪಣೀಯೋ ಮನುಷ್ಯಃ" ಎಂದನು. ಎಂದ ಮೇಲೆ ಆ ಸೂರ್ಯನನ್ನು ನೋಡಬೇಕಾದರೆ ಎಷ್ಟು ತ್ಯಾಗಶಕ್ತಿಯು ಬೇಕಿಲ್ಲ! "ಅಮೃತತ್ವಮಿಚ್ಛನ್ ಆವೃತ್ತಚಕ್ಷು"ಗಳು ಧೀರರೆಸರಿ.

ಪುನಃ ರಾಮಕೃಷ್ಣಪರಮಹಂಸರ ಉದಾಹರಣೆಯನ್ನೇ ನೋಡಬಹುದು. ಮನೆಯ ಯಜಮಾನನ್ನು ನೋಡಲು ಇಚ್ಛಿಸುವನು ಮನೆಯ ಮುಂದಿನ ಸುಂದರ ಹೂದೋಟ, ಅಂಗರಕ್ಷಕರು, ಆಳುಕಾಳು ಇವುಗಳನ್ನು ಮೀರಿ ಧಾವಿಸಿ ಒಳನುಗ್ಗಬೇಕು ಯಜಮಾನ ಸಮಕ್ಷಮ ಭೇಟಿಯಾದ ನಂತರ ತಾನೇ ಅವನನ್ನು ಸಂಗಡ ಕರೆದೊಯ್ದು ತನ್ನ ಸಂಪತ್ತನ್ನು ತೋರಿಸುವನು. ಅಂದರೆ ಅವಶ್ಯ ಯಜಮಾನನ್ನು ನೋಡಲೇಬೇಕು. ಹಾಗೆಯೇ ಹೊರಗಿನ ಮೆರಗು ಬಣ್ಣ ಪಾಶಗಳಿಗೆ ತುತ್ತಾಗದೆ, ಧೀರ

ನಾಗಿ ಉತ್ಸಾಹದಿಂದ ಮುಂದೆ ಮುಂದೆ ನುಗ್ಗಬೇಕು. ಈ ಸತ್ಯವನ್ನರಿತವನೇ ಮುಕ್ತನು. ದುಷ್ಕರ್ಮಗಳನ್ನೆಲ್ಲಾ ದೂರಮಾಡಿದ ಅವನು ಶಾಂತಮನಸ್ಕನಾಗುತ್ತಾನೆ. ಅವನಿಗೆ ಬ್ರಹ್ಮಸಾಕ್ಷಾತ್ಕಾರವಾಗುತ್ತದೆ. ಆದುದರಿಂದಲೇ "ನಾವಿರತೋ ದುಶ್ಚರಿತಾನ್ನಾಶಾಂತೋ ನಸಮಾಹಿತಃ। ನಶಾಂತಮನಸೋ ವಾಪಿ ಪ್ರಜ್ಞಾನೇನೈನಮಾಪ್ನುಯಾತ್" ಎಂದು (ಕಠೋಪನಿಷತ್ 1-2-24) ಹೇಳಿರುವುದು. ಆದುದರಿಂದಲೇ ಈ ಸೂರ್ಯೋಪಸಾನೆಗೆ ಇಷ್ಟು ಮಹತ್ವವನ್ನು ಈ ಉಪನಿಷತ್ತು ಕೊಟ್ಟಿದೆ. ಜಗತ್ತಿನ ಪೋಷಣೆಗೆ ಸೂರ್ಯನ ಪ್ರಕಾಶವು ಅತ್ಯಗತ್ಯ. ಹಾಗೆಯೇ ಅಂತರ್ಪ್ರಕಾಶಕ್ಕೆ ಈ ಸೂರ್ಯನ ಕಿರಣಗಳು ಅಗತ್ಯ. ಸೂರ್ಯನ ಪ್ರತಿಭೆಯಿಂದ ಒಳಗೂ ಹೊರಗೂ ಕಲಿಕಲ್ಮಷಗಳು ನಾಶವಾಗುವುವು. ಕಲ್ಮಷ ರಹಿತನಾದ ಮೇಲೆ ಉಳಿಯುವುದು ಸ್ವಚ್ಛ ಸ್ವರೂಪಿ ಪೋಷಕ ಸೂರ್ಯ-ಜಗದಾತ್ಮ. ಈ ಸೂರ್ಯನ ಝಳಕ್ಕೆ ತಾಕಿದರೆ ಕರ್ಮಗಳೆಲ್ಲವೂ ತಾವೇ ಭಸ್ಮವಾಗುವುವು. ಅಂದರೆ ಸುಟ್ಟ ಬೀಜಗಳು ಹೇಗೆ ಅಂಕುರಿಸಲಾರವೋ ಹಾಗೆಯೇ ಈ ಕರ್ಮಗಳು ಮಾನವನನ್ನು ಸೆರೆಹಿಡಿಯಲಾರವು. ಆದುದರಿಂದ ಈ ಸೂರ್ಯ ಪ್ರತ್ಯಕ್ಷ ತೀರಾ ಅಗತ್ಯ ಸಾಧಕನಿಗೆ. ಈ ಗುರಿಯಿಟ್ಟುಕೊಂಡಿರುವ ಸಾಧಕನ ಕೊನೆಯ ಪ್ರಾರ್ಥನೆ ಇದು.

ಒಳ್ಳೆಯ ಮಾರ್ಗ (ಸುಪಥಾ)ದಲ್ಲಿ ನಮ್ಮನ್ನು ಕರೆದೊಯ್ಯಲು ಬೇಡಿಕೆ. ಸರ್ವಶ್ರೇಷ್ಠನಾದ ನೀನು ಎಲ್ಲವನ್ನು ತಿಳಿದು. ಕುಟಿಲ ಕರ್ಮಪಾಶಗಳಿಂದ ಬಿಡಿಸಿ, ವಕ್ರಡೊಂಕು ದಾರಿಯಿಂದ ಬಿಡಿಸಿ ಋಜುಮಾರ್ಗದಲ್ಲಿ ಬಿಡು, ಎಂದು ಈ ಸಾಧಕಥೆ ಹೃತ್ಪೂರ್ವಕ ಪ್ರಾರ್ಥನೆ ಇದು. ವಕ್ರಮಾರ್ಗದಲ್ಲಿ ನಡೆದರೆ ನಿಶ್ಶಕ್ತರಾಗಿ ಕೆಳಗೆ ಬೀಳುವುದು ಸಹಜ. ಋಜುಮಾರ್ಗದಲ್ಲಿ ನಡೆದರೆ ಶಕ್ತಿ, ತ್ರಾಣ ಬರುವುದು. ಈ ಆತ್ಮನೇ, ಸೂರ್ಯನೇ ಶಕ್ತಿದಾತ. ಆದುದರಿಂದ ಇವನಿಗೆ ಪುನಃ ಪುನಃ ನಮಸ್ಕಾರ.

# ಜಾನಪದ ಸಾಹಿತ್ಯ

(ಹಳ್ಳಿಯ ಹಾಡುಗಳು)

ಸೂರ್ಯ ಸಿಂಹಾಸನಾಧೀಶ್ವರ

**ಶ್ರೀ ಜ. ಚ. ನಿ.**

ಮಾನವ ಜೀವನದಲ್ಲಿ ಕಲೆ ಹಾಸುಹೊಕ್ಕಾಗಿ ಹಬ್ಬಿದೆ. ಮಾನವನು ಕಲಾಮಯ ಜೀವಿ ಮಾನವನು ಆದಿಕಾಲದಿಂದಲೂ ತನ್ನ ಕಲೆಯನ್ನು ಪ್ರದರ್ಶಿಸುತ್ತ ಬಂದಿದ್ದಾನೆ. ಮಾನವನಿಂದ ಕಲೆ ಹೊರಹೊಮ್ಮುವುದು ಮುಖ್ಯವಾಗಿ ಮೂರು ಅಂಗ ಗಳಿಂದ! ಬಾಯ್ ಕಯ್ ಕಾಲ್ ಇವು ಆ ಮೂರು ಮುಂಖ್ಯಾಂಗಗಳು. ಬಾಯಿಂದ ಆಡುತ್ತಾನೆ ಅಥವಾ ಹಾಡುತ್ತಾನೆ. ಕೈಯಿಂದ ಚಿತ್ರ ಬರೆಯುತ್ತಾನೆ. ಶಿಲ್ಪ ರಚಿಸುತ್ತಾನೆ. ಕಾಲಿಂದ ಕುಣಿಯುತ್ತಾನೆ. ಮೊದಲಿನವು ಗೀತ-ಕಾವ್ಯಗಳೆನಿಸಿದವು. ಎರಡನೆಯದು ಚಿತ್ರ ಶಿಲ್ಪಗಳೆನಿಸಿದವು. ಮೂರನೆಯದು ನೃತ್ಯಲಾಸ್ಯಗಳೆನಿಸಿದವು. ಮೊದಲಿನದು ಶ್ರಾವ್ಯಕಲೆ. ಉಳಿದವೆರಡು ನೃತ್ಯಕಲೆಗಳು.

ಮಾನವನು ತನ್ನ ಭಾವಗಳನ್ನು ಅಭಿವ್ಯಕ್ತಿಗೊಳಿಸಲು ಭಾಷೆಯನ್ನು ಉಳಿಸಿಕೊಂಡು ಬಂದಿದ್ದಾನೆ. ಭಾಷೆ ವೇದಮಯಿಯಾಗಿ ಜಾನಪದಿಯಾಗಿ ಹೀಗೆ ದ್ವಿಮುಖವಾಗಿ ಹರಿದು ಬಂದಿದೆ. ಛಂದ-ಬಂಧಗಳಿಂದ ಕೂಡಿದುದು ವೇದವಾಙ್ಮಯ. ಭಾಷೆಯ ಛಂದ-ಬಂಧಗಳಿಲ್ಲದಿದ್ದರೂ ಬಾಳಿನ ಅಂದ ಚಂದಗಳುಳ್ಳದು ಜನಪದ ವಾಙ್ಮಯ.

ಮಾನವನು ತನ್ನ ಬಾಳಿನ ಅನುಭವವನ್ನು ಹಾಡಿನ ರೂಪದಲ್ಲಿ ಹೊರಹೊಮ್ಮಿಸುತ್ತ ಬಂದಿದ್ದಾನೆ. ಗಾದೆಯ ರೂಪದಲ್ಲಿ ನುಡಿಯರೂಪದಲ್ಲಿ ಹಾಡುತ್ತ ಬಂದಿದ್ದಾನೆ. ತನ್ನ ಭಾವ ಅನುಭಾವಗಳನ್ನು ಹೊಮ್ಮಿಸಲು ಭಾಷೆಯು ಹೆಚ್ಚು ಸಹಕಾರಿಯಾಯಿತು. ಸುಲಭವಾಯಿತು. ಇದರಿಂದಾಗಿ ಎಂಥವರು ಎದೆಯೊಳಗಿನದನ್ನು ತೋಡಿಕೊಳ್ಳಲು ಅನುಕೂಲವಾಯಿತು. ಇದರ ಫಲವಾಗಿಯೇ ಜನಪದ ವಾಙ್ಮಯ ಸೃಷ್ಟಿ ಆದಿ ಆಯಿತು, ಹದಸಿಕ್ಕಿತು.

ಮಾನವನು ತನ್ನ ಭಾವನೆಗಳನ್ನು ಬಾಷೆಯ ಮುಖಾಂತ ಉಳಿಸಲು ಬೆಳಿಸಲು ಹೆಣಗಿದರು. ಅಂತೆಯೆ ಮತ್ತೊಬ್ಬರನ್ನು ತಣಿಸಲು ಯತ್ನಿಸಿದನು. ಈ ಯತ್ನವೆ ಮಾತು ಗೀತ ಸಂಗೀತಾದಿಗಳಿಗೆ ಜನ್ಮವಿತ್ತಿತು ತನ್ನ ಭಾವನೆಗಳನ್ನು ಬರೀಮಾತಿನಿಂದ ಹೊರಹೊಮ್ಮಿಸುವುದು. ಮಾನವನ ಕಲಾಪ್ರೇಮಕ್ಕೆ ಸಾಲದೆನಿಸಿತು. ಸಂಗತಿಯ ತಿಳಿಸಲು ಸಂಗೀತವೇ ಬೇಕೆನಿಸಿತು. ಆ ಸಂಗೀತಕ್ಕೆ ತಕ್ಕ ಮಾತಿನ ಮಿತಿ-ಗತಿಗಳೇ ಗೀತಗಳೆನಿಸಿದವು.

ನಾಗರೀಕ ಗೀತಗಳಿಗಿಂತ ನಾಡ ಹಾಡುಗಳಲ್ಲಿ ಹೃದಯ ತುಂಬಿ ತುಳುಕಾಡುತ್ತಿದೆ. ಇದರಿಂದಾಗಿ ನಾಡ ಹಾಡುಗಳು ಕೇಳುವವರ ಕಿವಿ-ಮನಗಳನ್ನು ಬೇಗ ಸೆಳೆಯುತ್ತವೆ. ಸಂತಸವೀಯುತ್ತವೆ.

ನಾಡಿನ ಜನತೆಯು ಪರಂಪರಾಗತ ರೀತಿ ನೀತಿಗಳನ್ನು ರತಿ-ವಿರತಿಗಳನ್ನು ನಡೆ-ನುಡಿಗಳನ್ನು ನಿಸರ್ಗಕ್ಕೆ ಹೊರ

ತಾಗದಂತೆ ಕೇಳಿ ಕಂಡು ನಲಿಯಬೇಕಾದರೆ ಹಳ್ಳಿಯ ಹಾಡುಗಳೇ ಮೂಲ್ಯ ಸಂಪತ್ತು, ಮೂಲ್ಯ ಸಾಹಿತ್ಯ. ಹಳ್ಳಿಗರ ಬಾಳಾಟ ನೋಟವಿದೆ- ಮಾಟವಿದೆ ಹಳ್ಳಿಯ ಹಾಡುಗಳಲ್ಲಿ ! ಅವುಗಳಲ್ಲಿ ನೋಡುವ ಮಾತಾಡುವ ಪಾತ್ರಗಳು ಪಾತ್ರಾಂತರಗಳಲ್ಲಿ; ಮೂಲ ಜೀವಂತ ಪಾತ್ರಗಳು. ಆ ಪಾತ್ರ ಜೀವನವೇ ನಮ್ಮ ಜೀವನ ವಾದಂತಿರುತ್ತದೆ. ಆ ಪಾತ್ರಗಳು ನಮ್ಮೊಡನೆ ನೇರ ವಾಗಿ ಎದುರಿನಲ್ಲಿದ್ದು ಎದೆಯಲ್ಲಿದ್ದು ಮಾತಾಡಿದಂತಿರು ತ್ತದೆ. ಅದುವೆ ಸಹಜ ಸಾಹಿತ್ಯ ; ಸರಸ ಸಾಹಿತ್ಯ.

ನೋವಿನೆದೆಗೆ ನಲಿವನ್ನು ನೀಡಬಲ್ಲುದು ಸಾಹಿತ್ಯ ; ಕಲ್ಲೆದೆಯ ಮೆಲ್ಲೆದೆಯ ಮಾಡಬಲ್ಲದು ಸಾಹಿತ್ಯ. ಭಾವಶೂನ್ಯ ಹೃದಯದಲ್ಲಿ ಭಾವೋದ್ರೇಕವ ತರಬಲ್ಲುದು ಸಾಹಿತ್ಯ. ಹೊಲಬುಗೆಟ್ಟ ಹೃದಯವನ್ನು ಹೊಲಬಿಗೆ ತರಬಲ್ಲುದು ಸಾಹಿತ್ಯ. ಅರಳದಿರುವ ಎದೆಯನ್ನು ಎದೆಯನ್ನು ಅರಳಿಸಬಲ್ಲುದು ಸಾಹಿತ್ಯ. ಇದೆಲ್ಲವನ್ನು ಮಾಡಬಲ್ಲುದು ಜನಪದ ಸಾಹಿತ್ಯ.

ತನ್ನ ರೂಪನ್ನು ಇನ್ನೊಬ್ಬರ ಕಣ್ಣಿಗೆ, ತನ್ನ ರುಚಿ ಯನ್ನು ಇನ್ನೊಬರ ನಾಲಿಗೆಗೆ ಕೊಡುವುದೆ ಮಾನ ವತೆಯ ಕುರುಹಲ್ಲಿ. ,ಇಷ್ಟು ಮಾತನ್ನು ತರುಮರಾದಿ ಗಳು ಹುಳ ಹಕ್ಕಿಗಳು ಪಶು ಪ್ರಾಣಿಗಳು ಸಹ ಮಾಡು ತ್ತವೆ. ತನಗಾದ ನೋವು ನಲಿವುಗಳನ್ನು ಅರಿವು ಅಪೇಕ್ಷೆಗಳನ್ನು ಹೆಚ್ಚು-ಕಮ್ಮಿಗಳನ್ನು ಸೋಲು-ಗೆಲವು ಗಳನ್ನು ಇತರರಿಗೆ ಹಾಡಿನ ಮೂಲಕ ಹಂಚುವದೆ ಮಾನವತೆಯ ಮೇಲ್ಮೆಗೆ ಹೆಗ್ಗುರುತು. ಮೂಡಿ ಅಡಗುವ ದೃಶ್ಯಗಳನ್ನು, ಧ್ವನಿಗಳನ್ನು ಭಾವನೆಯ ಪರಂಪರೆಗಳನ್ನುಹಾಡಿನ ಮೂಲಕ ಹೃದಯಂಗಮವಾಗಿ ಚಿತ್ರಿಸಿ ನಿಡುಗಾಲ ನೆಲೆ ನಿಲ್ಲಿಸಬಲ್ಲ ಸರ್ವೋತಮ ಕಲೆ ಯನ್ನು ಕಂಡುಕೊಂಡನು ಮಾನವನು. ಇಂತಹ ಈ ಕಲೆಯಲ್ಲಿ ವಾಙ್ಮಯಕ್ಕೆ ಅದರಲ್ಲಿಯೂ ಜನಪದ ವಾಙ್ಮಯಕ್ಕೆ ಹೆಚ್ಚಿನ ಮೆಚ್ಚಿನ ಸ್ಥಾನವಿದೆ.

ಹಳ್ಳಿಯ ಹಾಡುಗಳಲ್ಲಿ ಕಲಿಕೆಯ ಅನುಕರಣೆಯ ಸಂಬಂಧ ತೀರ ಕಡಿಮೆ. ಅವು ಹಳ್ಳಿಗರ ಹೃದಯ ಧ್ವನಿ ಪ್ರೇರಿತವಾದಾಗ ಪ್ರೇಮ ಪ್ರೇರಿತವಾದಾಗ ಕಾರ್ಯೋನ್ಮುಖರಾದಾಗ ತಾವಾಗಿಯೆ ಹೊಮ್ಮಿ ಬಂದ ವುಗಳು. ಮಕ್ಕಳ ಆಡಿಸುವಾಗ, ಮದುವೆ ಮಾಡು ವಾಗ ಅವರ ಬಾಯಿಂದ ಹಾಡು ಹೊಮ್ಮುತ್ತವೆ. ಕಸ ಕೀಳುವಾಗ, ಸಸಿ ನಾಟುವಾಗ ರಚನೆಯಾದವು ಕೆಲವು. ಹಂತಿ ಹೊಡೆವಾಗ, ಬಾವಿಯಿಂದ ನೀರೆತ್ತುವಾಗ ಹಾಡಿದವು ಹಲವು. ತವರನ್ನು ನೆನಿಸಿದಾಗ, ತಾಯಿಯ ಕರುಳನ್ನು ಬಯಸಿದಾಗ, ಉಕ್ಕಿಬಂದವು ಕೆಲವು ಹಳ್ಳಿಗರ ಹೃದಯ-ಮನಸ್ಸುಗಳಿಗೆ ಉಂಟಾದ ಯಾವುದೆ ಪರಿಣಾಮವಾಗಲಿ ಅದು ಹಾಡಿನ ರೂಪನ್ನು ತಾಳ ಬಲ್ಲುದು, ತಾಳಿದೆ. ಕೈಕೊಂಡ ಕಾರ್ಯವನ್ನು ಕೊನೆ ಗಾಣಿಸಲು, ಹೊತ್ತಹೊರೆಯನ್ನು ಹಗುರಾಗಿಸು ಹಾಡಿದ ಹಾಡುಗಳುಂಟು. ಈ ದಿಸೆಯಲ್ಲಿ ಮೇನೆ ಪಲ್ಲಕ್ಕಿಗಳು ಹೊತ್ತಾಗ ಹಾಡುವ ಸಾಹಿತ್ಯ ಸಾಕಷ್ಟಿದೆ. ಎತ್ತಿನ ಗಾಡಿ ಹೊಡೆಯುವಾಗ, ಎತ್ತರ ದಿನ್ನೆ ಏರುವಾಗ ಹೊಮ್ಮಿದ ಹಾಡುಗಳಿವೆ. ಜರಗಿದ ಜೀವನ ಚರಿತ್ರೆ ಗಳನ್ನು ಚಿತ್ರಿಸಿದ ಜನಪದ ಸಾಹಿತ್ಯವಿದೆ. ಹೀಗೆ ಕರುಣ, ಶೃಂಗಾರ, ವೀರ, ಹಾಸ್ಯ, ಭಕ್ತಿ ಮುಂತಾದ ಎಲ್ಲ ರಸಗಳನ್ನೂ ಬಳಸಿಕೊಂಡ ಅಗ್ಗಳಿಕೆ ಜನಪದ ಸಾಹಿತ್ಯಕ್ಕಿದೆ. ರೀತಿ ನೀತಿಗಳನ್ನು ಹೇಳುವ, ಮತ ಧರ್ಮಗಳನ್ನು ಹೆಣೆವ, ಭಕ್ತಿ ಭಾವವನ್ನು ಬಣ್ಣಿಸುವ ಹಾಡುಗಳಿಗೂ ಕಮ್ಮಿಯಿಲ್ಲ. ತತ್ತ್ವ ಪ್ರತಿಪಾದಿಸುವ ಪದಗಳು ತುಂಬಿಕೊಂಡಿವೆ.

ಹಳ್ಳಿಯ ಹಾಡುಗಳಿಗೆ ನಾಡಿನಲ್ಲಿ ಕೊರತೆಯಿಲ್ಲ. ನಾಡಿಗರ ಹೃದಯಾನುಭವದಿಂದ ಹೊರಹೊಮ್ಮಿ ಸಮೃದ್ಧವಾಗಿ ಜನಪದ ಸಾಹಿತ್ಯ ಬೆಳೆದು ಬಂದಿದೆ. ಇದೀಗ ಈ ಸಾಹಿತ್ಯ ಓದುಗರ ಮನಸ್ಸನ್ನು ಮಿಗಿಲಾಗಿ ಆಕರ್ಷಿಸಿದೆ. ಆಕರ್ಷಿಸುವ ಆಕಾರ-ಶಕ್ತಿಗಳು ಅದ ಕ್ಕಿದೆ. ಅದು ಯಾವನೋ ಒಬ್ಬ ಕವಿ ಅಥವಾ ಸಾಹಿತಿ ತಲೆ ಕೆದರಿಕೊಂಡು ಕುಳಿತು ಕಲ್ಪಿಸಿ ಬರೆದ ಸಾಹಿತ್ಯವಲ್ಲ ಅವರವರ ಅನುಭವವನ್ನು ಅವರವರೆ ಚಿತ್ರಿಸಿದ ಅಮೃತ ಸಾಹಿತ್ಯವಿದು.

ಸಾಹಿತ್ಯ, ಪ್ರವಾಹಕ್ಕೆ ವೇದಶಾಸ್ತ್ರಗಳೊಂದುದಡ ; ಗಾದೆಯ ಮಾತುಗಳು ಇನ್ನೊಂದುದಡ. ಇವೆರಡರ ನಡುವೆ ಒಮ್ಮೆ ಮಂದವಾಗಿ ಇನ್ನೊಮ್ಮೆ ವೇಗವಾಗಿ ಆ ಎರಡು ದಡಗಳನ್ನು ತಬ್ಬಿಕೊಂಡು ತನ್ನದೇ ಆದ ಗಮ್ಯ ಗತಿಯಲ್ಲಿ ರಮ್ಯಸ್ಥಿತಿಯ ಬಾಳೊಸಗೆಯನ್ನು ಬಿತ್ತರಿಸುತ್ತ ಸಾಗಿದ ತಂಪಿನ ತರಂಗಿಣಿ ಜನಪದ

ಸಾಹಿತ್ಯ. "ಪದ್ಯ ವದ್ಯ" ಎಂಬ ಕವಿವಾಣಿಯನ್ನು ಕಳಾಪೂರ್ಣವಾಗಿಸಿದವುಗಳು ಹಳ್ಳಿಯ ಹಾಡುಗಳು. ಪ್ರಕೃತಿ ಸೊಗಸಿನ ಜನಪದ ಸರಸ್ವತಿಯನ್ನು ಕಾಣ ಬೇಕಿದ್ದರೆ ಹಳ್ಳಿಯ ಹಾಡುಗಳಲ್ಲಿ! ಹೃದಯಂಗಮ ಭಾವನನ್ನು, ಬಾಳಬಗೆಯನ್ನು ಅನುಭವಿಸಬೇಕಿದ್ದರೆ ಅವೇ ಹಳ್ಳಿಯ ಹಾಡುಗಳಲ್ಲಿ. ಅನುಭವಕ್ಕೆ ಎಟಕುವ ಮಧುರವಾಣಿಯನ್ನು ಕೇಳಬೇಕಿದ್ದರೆ ಆ ಹಳ್ಳಿಯ ಹಾಡುಗಳಲ್ಲಿ !

ಕವಿ ಸಮಯಕ್ಕೆ ಇಲ್ಲಿ ಸಮಯವಿಲ್ಲ; ಸಂದಿಲ್ಲ ಕೃತಕತೆಗೆ ಇಂಬಿಲ್ಲ. ಸ್ವಂತಭಾವಾವೇಶದಿಂದ ಬಂದ ಹಾಡುಗಳಿವು. ಹಳ್ಳಿಯ ಹಾಡುಗಳಲ್ಲಿ, ಕಾವ್ಯಶಕ್ತಿಗಿಂತ ಕಲಾಶಕ್ತಿ ಹೆಚ್ಚು. ಭಾವಶ್ರೀಗಿಂತ ರಸರುಚಿ ಹೆಚ್ಚು, ಮೆಚ್ಚು. ಕಣ್ಣಾರೆ ಕಂಡುದನ್ನು ಭಾವಕ್ಕೆ ಬಂದುದನ್ನು ಹಾಡುವ ರೂಢಿ ಹಳ್ಳಿಯ ಹಾಡುಗಳಲ್ಲಿದೆ. ಹಳ್ಳಿಯ ಹಾಡುಗಳು ಬರೀ ಬುದ್ಧಿಯ ಪ್ರತಿಬಿಂಬವಲ್ಲ, ಕೌಶಲ್ಯವಲ್ಲ. ಹೃದಯ ಪ್ರಧಾನವುಳ್ಳ ಹಾಡುಗಳವು. ಬರಿ ಕಲ್ಪನೆಯ ಕಾವ್ಯಗಳಲ್ಲ. ಕಂಡ ಕಥನ ಕವನಗಳವು. ಅವುಗಳಲ್ಲ ಶಬ್ದಾಲಂಕಾರವಿಲ್ಲದಿರಬಹುದು. ಅವು ಶ್ರೋತ್ರಾಲಂಕಾರದಿಂದ ವಂಚಿತವಾಗಿಲ್ಲ.

ನಾಲಿಗೆಯ ಆಸೆಯನ್ನು ತೀರಿಸಲು ರುಚಿ, ಕಣ್ಣಿ ಕಾಂಕ್ಷೆಯನ್ನು ಪೂರೈಸಲು ರೂಪಗಳ ಅವಶ್ಯಕತೆ ಹೇಗೋಹಾಗೆ ಕಿವಿ ಹೃದಯಗಳ ಹಸಿವನ್ನು ಹಿಂಗಿಸಿ ತಣಿಸಲು ಬರೀಮಾತುಗಳು ಸಾಲದೆ ಜನಪದ ಸಾಹಿತ್ಯ ಸೃಷ್ಟಿಯಾಗಬೇಕಾಯಿತು. ಬಾಳಿನ ಬಗೆಬಗೆಯ ಸನ್ನಿವೇಶಗಳನ್ನು ರಸ ಶೈಲಿಯಲ್ಲಿ ಚಿತ್ರಿಸಿ ಪಾಕಗೊಳಿಸಿ ಮನಬಯಸಿದಾಗಲೆಲ್ಲ ಹಾಡಿಹಾಡಿ ಕೇಳಿ ಕೇಳಿ ತಣಿಯಲವಕಾಶವಾಯಿತು. ಸಾಹಿತ್ಯದಿಂದ ಹಿಂದೆ ನಡೆದುದನ್ನು-ನುಡಿದುದನ್ನು ಇಂದು ಕಾಣುವಂತಾಯಿತು-ಕೇಳುವಂತಾಯಿತು. ಕಂಡು ಕೇಳಿ ತಣಿಯುವಂತಾಯಿತು. ಅದು ಮಾಸದ ರೂಪ ರುಚಿಗಳುಳ್ಳದ್ದು. ಜನಪದ ಸಾಹಿತ್ಯ ಅದೊಂದು ಸುಂದರವಾದ ಶಬ್ದ ಚಿತ್ರ. ಅದರಲ್ಲಿ ಕಣ್ಣಿಗೆ ಕಾಣುವ ಬಣ್ಣವಿಲ್ಲದಿದ್ದರೂ ಭಾವಾಕರ್ಷಿಸುವ ಭಾವಸೌಂದರ್ಯವಿದೆ. ಅದು ಮಾಸದ ಚೆಲುವು, ಮಾಸದ ಬಣ್ಣ! ಅಂತೆಯೆ ಅದೊಂದು ಸವಿಯಾದ ರಸಪಾಕ. ಅದರಲ್ಲಿ ನಾಲಿಗೆಗೆ ನಿಲುಕುವ ರುಚಿಯಿಲ್ಲವಾದರೂ ಮನ ತಣಿಸುವ ಸಿಹಿಯಿದೆ. ಅದು ಹಳಸದ ಔಗರ, ಹಳಸದ ಮಧುರ.

ಮಾನವನು ಮಾತು ಕಲಿತಮೇಲೆ ಮಾತಿಗೆ ಮಾತು ಮುಂದುವರಿಯಿತು. ಮಂಟಪ ರಚನೆಯಾಯಿತು. ಆ ಮಾತಿನ ಮಂಟಪ ರಚಿಸಲು ಗದ್ಯ, ಸಾಹಿತ್ಯ ಜನಿಸಿತು. ರಾಗಕ್ಕೆ ಹೊಂದಿಸಲು ಪದ್ಯ ಸಾಹಿತ್ಯ ಉದಯಿಸಿತು. ಮಾತೆಂಬ ಬಳ್ಳಿಯ ಹೂವು-ಹಣ್ಣುಗಳೆ ಗದ್ಯ ಪದಗಳು ಹಳ್ಳಿಯ ಹಾಡುಗಳು ಮಾತು ಬಳ್ಳಿಯ ಮಾಗಿದ ಹಣ್ಣುಗಳು. ಕಲಿತು ಬರೆದವರ ಕಾವ್ಯಗಳು ಕಸುಗಾಯಿ ಹರಿತಂದು ಹಣ್ಣಾಗಿಸಿಟ್ಟ ಪೇಟಿಯ ಹಣ್ಣುಗಳು.

ಜನತೆ ಎಚ್ಚತ್ತುದರ ಕುರುಹು ಹಾಡುಗಾರಿಕೆ. ಉದಯವಾದೊಡನೆ ಗೂಡಿನಿಂದ ಎದ್ದೊಡನೆ ಹಕ್ಕಿಗಳು ಹಾಡತೊಡಗುತ್ತವೆ. ಕೋಳಿಗಳು ಕೂಗತೊಡಗುತ್ತವೆ. ತಂಗಾಳಿ ತೀಡುತ್ತ ಮರದೆಲೆಗಳ, ಬಿದಿರುಮೊಳೆಗಳ ಮುಖಾಂತರ ನಿಸರ್ಗವೇ ಹಾಡತೊಡಗುತ್ತವೆ. ಹೀಗಿರುವಾಗ ಮಾನವನಿಂದಲೂ, ಹೊಟ್ಟೆತುಂಬಿ, ಮೈದುಂಬಿ ಬಳಿಕ ಹೃದಯ ಹಸಿವನ್ನು ಹಿಂಗಿಸಲು ಅರ್ಥವತ್ತಾದ ಹಾಡಿಕೆ ಹೊಮ್ಮಿತು, ಹಾಡುಗಳ ಹಮ್ಮಿತು.

ಪ್ರೇಮ ಜೀವನ ಅಥವಾ ಭಕ್ತಿ ಭಾವನ ಇವೆರಡು ಮಾನವೀಯ ಜನ್ಮದಲ್ಲಿ ಜೀವನದಲ್ಲಿ ಅನಿವಾರ್ಯ ಶಕ್ತಿ ಭಾವ ಪರಂಪರೆಗಳನ್ನು ಹುಟ್ಟಿಸಿ ಹೆಚ್ಚಿಸುವ ಹಿರಿಯ ಶಕ್ತಿ! ಇದರಿಂದಾಗಿ ಮಾನವನಲ್ಲಿ ಬುದ್ಧಿಯ ನೆರುವಿನಿಂದ ಬಗೆಬಗೆಯ, ಭಾವ ಕುಸುಮಗಳು ಅರಳುತ್ತವೆ. ಅವೇ ಗುಂಪುಗೂಡಿ ಗಂಭೀರವಾಗಿ ಸಾಹಿತ್ಯ ಅಥವಾ ಕಾವ್ಯಮಾಲೆಯಾಗಿ ಮಾನವನಿಂದ ಹೆಣೆಯಲ್ಪಟ್ಟವು. ಅವು ಬಾಡದ ಹಾರಗಳಾಗಿ ಕಂಪಳಿಯದ ರಸ ಆರದ ಎಂದಿಗೂ ಹೊಸಹಾರಗಳಾಗಿವೆ. ಉಳಿದವು ಎದೆಯಿಂದ ಎದೆಗೆ ಬಂದು ಮರೆದವು, ಬಾಯಿಂದ ಬಾಯಿಗೆ ಬಂದು ನೆಲೆ ನಿಂದವುಸಲೆ ಬಾಳಿವವು.

ಮಾನವ ಜೀವನಕ್ಕೆ| ಬದುಕು ಎಷ್ಟು ಅವಶ್ಯವೋ ಅಷ್ಟೆ-ಅದಕ್ಕೂ ಹೆಚ್ಚು ಬೆಳಕು ಬೇಕು. ಬರೀ ಬಾಹ್ಯದ ಬೆಳಕಿದ್ದರೆ ಸಾಲದು ಬೌದ್ಧಿಕ ಬೆಳಕು ಬೇಕು.

ಜೀವಿಸಲು ಪದಾರ್ಥ ಬೇಕಾದಂತೆ ಜ್ವಲಿಸಲು ಸಾಹಿತ್ಯ ಬೇಕು. ಬೆಳಕನ್ನು ತಂದುಕೊಡಬಲ್ಲುದು ಶುದ್ಧ ಸಾಹಿತ್ಯ.

ತನ್ನ ಅನಂತರ ತಾನು ಬದುಕಲು ಸಂತಾನ ಪಡೆಯುತ್ತಾನೆ. ಸಂತಾನ ಮುಖಾಂತರ ತಾನು ಸಾಯದೆ ಇಹಪಲ್ಲಿ ಬದುಕಿರುವಂತೆ ಭಾವಿಸಿ ಸಂತಸಗೊಳ್ಳುತ್ತಾನೆ. ಸ್ವಾನುಭಾವಿಗೆ ಸಂತಾನರೂಪು ಜೀವನ ಶಾಶ್ವತವಲ್ಲ. ಸಾಹಿತ್ಯರೂಪ ಜೀವನ ಶಾಶ್ವತ, ಸರ್ವೋನ್ನತ ಸಂತಾನದಲ್ಲಿಯೂ ಸಾವಿನ ಪ್ರವಾಹ ಹರಿದುಬಂದು ಅಳಕು ಅಳಿಸಿರುವುದಿಲ್ಲ ಸಾಹಿತ್ಯ ಭೌತಿಕ ಸತ್ಯ. ಸಾಹಿತ್ಯದಲ್ಲಿ ಸಾವಿನ ಸುಳಿವಿಲ್ಲ. ಅಂಜಿಸುವ ಹಂಜಿಯಿಲ್ಲ. ಅದು ಅಕ್ಷರ. ಅಕ್ಷರದಿಂದ ಅದರ ಉದಯ.

ಸಾಹಿತ್ಯ ಮಾನವ ಜೀವಂತ ಮತ್ತು ಜ್ವಲಂತ ಚಟುವಟಿಕೆ. ಬಾಳಿನಲ್ಲಿ ಚಟುವಟಿಕೆ, ಬಾಳಿನಲ್ಲಿ ಅನುಭವ ಬೆಳಕನ್ನು ಗಳಿಸುವ ಹೊಲಬು, ಸಾವಿನ ಸಮಸ್ಯೆಯನ್ನು ತೀರಿಸುವ ಹವಣು. ತಪಸ್ಸಿನಿಂದ ತಿಳಿವಿನ ಬಾಳಿಗೆ ಬರುವ ಬದುಕು ಬುದ್ಧಿ ಶುದ್ಧಿಯಾಗಿ ಸಿದ್ಧಿಗೇರುವ ಸಿದ್ಧಾಂತಪಥ ತಾನು ಕಂಡ ಬೆಳಕನ್ನು ಬೇರೆಯವರಿಗೆ ಹಂಚುವ ಸತ್ಯಸಾಧನ. ಬಾಳಿನಲ್ಲಿ ಅಳಿದವರನ್ನು ಬದುಕಿಸಬಲ್ಲುದು ಭಾಷೆ. ಮಾನವನು ಮಾಡಿದ ಕ್ರಿಯೆಗಳನ್ನು ನೋಡಿದ ನೋಟಗಳನ್ನು ಕೇಳಿದ, ಮೂಸಿದ ಮುಟ್ಟಿದವುಗಳನ್ನು ಪರಿಣಮಿಸಿದ ಪ್ರೇಮಗಳನ್ನು ಪ್ರದರ್ಶಿಸಿ ಪ್ರಜ್ಞೆಯನ್ನು ಅನುಭವಿಸಿದ ಭಾವಪರಂಪರೆಗಳನ್ನು ವಾಙ್ಮಯರೂಪದಲ್ಲಿ ಕೇಂದ್ರೀಕರಿಸಿ ಸಾಹಿತ್ಯವಾಗಿಸುತ್ತಾನೆ. ಇಂತಹ ಸಾಹಿತಿಗೆ ಹತಿಯಿಲ್ಲ, ಪ್ರತಿಯಿಲ್ಲ. ಇವನ ಅನುಭೂತಿ ಅಪ್ರತಿಮವಾದುದು, ಸಹಾನುಭೂತಿ ಸಾರ್ವತ್ರಿಕವಾದುದು.

ವಾಙ್ಮಯ ವೈಖರಿಯು ಕವಿ ಕೋಗಿಲೆಯ ಕಲರವ. ಜೀವನದಲ್ಲಿ ವಸಂತೋದಯವಾದಾಗ ಭಾವಾನುಭಾವಗಳ ಮಾಂದಳಿರ ತಿಂದಾಗ ಕವಿ ಕೋಕಿಲೆಯು ಕಾವ್ಯ ಕಲರವ ಹೊರಹೊಮ್ಮಿಸುತ್ತದೆ. ಆ ದನಿ ಕೇಳಿದ ಪ್ರಾಪಂಚಿಕ ದುಃಖರೂಪ ಫಾಲ್ಗುಣದ ಬಿಸಿ ಕಮ್ಮಿಯಾಗಿ ಬಗೆ ತಂಪಾಗುತ್ತದೆ ಬಗೆ ಸೊಂಪಾಗುತ್ತದೆ, ಕಿವಿಗಿಂಪಾಗಿರುತ್ತದೆ. ತನ್ನ ಹೊಸ ಬಗೆಯ ಸವಿಗಲೆಗಳ ಸಮನಿಸುತ್ತದೆ. ಈ ದೃಷ್ಟಿಯಲ್ಲಿ ಜನಪದ ಸಾಹಿತ್ಯವು ಬಾಳ ಬಸಂತದಲ್ಲಿ ಜನಪದ ಕವಿ ಕೋಕಿಲೆಯ ಪಂಚಮಸ್ವರ.

ಮಾನವನು ನಿಸರ್ಗವಾಗಿ ಸಾಮಾಜಿಕ ಜೀವಿ. ಆತನು ತನಗಾದ ಜ್ಞಾನಾನುಭವಗಳನ್ನು ರಸಭಾವಗಳನ್ನು ಸಾಮಾಜಿಕರಿಗೆ ಹಂಚಲು ಹವಣಿಸುತ್ತಾನೆ. ಆ ಹವಣು ಆತನ ಮಾತಿನಿಂದ ನೆರವೇರುತ್ತದೆ. ಮಾತಿಗಿಂತಲೂ ಹೆಚ್ಚು ಹಾಡಿನಿಂದ ಮೈಗೂಡಿ ಬರುತ್ತದೆ ನುಡಿಗಿಂತಲೂ ಹಾಡಿನಲ್ಲಿ ಹೃದಯ ನಾದತರಂಗಗಳು ತೀರ ಸ್ಫುಟವಾಗಿ ಹೃದಯಾಕರ್ಷಕವಾಗಿ ಇರುತ್ತವೆ ಹಾಡಿನ ಮೂಲಕ ನಡೆದುಹೋದ ಕ್ರಿಯೆಯನ್ನು ಕಣ್ಣುಮುಂದೆ ಕಟ್ಟಿದಂತೆ ಮಾಡಿ ಮೂರ್ತರೂಪವನ್ನು ತರುತ್ತಾನೆ. ಶ್ರೋತೃಗಳನ್ನು ಸಂತೋಷಗೊಳಿಸಿ ಸಾಮಾಜಿಕರ ಮನಾರಾಧನೆಯನ್ನು ಮಾಡುತ್ತಾನೆ ಇದುವೆ ಈಶ್ವರ ಪೂಜೆ. ಈ ಪೂಜೆಗೆ ಬೇಕು ಸಾಹಿತ್ಯ ಅಂತಹ ಸಾಹಿತ್ಯದಲ್ಲಿ ಶ್ರೇಷ್ಠಸ್ಥಾನವಿದೆ ಜನಪದ ಸಾಹಿತ್ಯಕ್ಕೆ !

ಜನಜೀವನ ದರ್ಶನ ಜನಪದ ಸಾಹಿತ್ಯ ಜನಪದ ಸಾಹಿತ್ಯದಲ್ಲಿ ಜನಜೀವನ ನೋವು-ನಲಿವು, ಆಸೆ ಆಕಾಂಕ್ಷೆ, ನಡೆ-ನುಡಿ, ಸೋಲು-ಗೆಲುವು, ಆಚಾರ ವಿಚಾರ, ಶಾಂತಿ-ಕ್ರಾಂತಿ ಇವೆಲ್ಲ ನಮ್ಮ ಕಣ್ಣೆದುರೇ ಕಂಡಾಂತಾಗಿ ಮನಕ್ಕೆ ಇಂಬಾಗಿ ಆ ಪಾತ್ರಗಳ ಜತೆಗೆ ನಮ್ಮ ಜೀವನವನ್ನು ಹೋಲಿಸಿ ನೋಡಿಕೊಳ್ಳುವ ದೃಷ್ಟಿ ಬರುತ್ತದೆ. ಬಾಳಿನ ಮುನ್ನಡೆಗೆ ಹೊಲಬ ದೋರುತ್ತದೆ. ಜನಪದ ಸಾಹಿತ್ಯ ಸ್ವಚ್ಛ ಮಣಿಮುಕುರ. ಅಲ್ಲಿ ಮೂಲಪಾತ್ರದ ಬಿಂಬವನ್ನೇ ನೋಡಬಹುದು, ನೋಡುತ್ತೇವೆ ಅಂತೆಯೇ ಅದು ಆದರ್ಶ ಸಾಹಿತ್ಯವಾಗಿದೆ.

ವೇದಾಗಮ ಸಾಹಿತ್ಯಜ್ಞಾನ ಪರೋಕ್ಷವಾದುದು ಜನಪದ ಸಾಹಿತ್ಯ ಪ್ರತ್ಯಕ್ಷವಾದುದು. ಇದರಿಂದಾಗಿ ಇದು ಅನುಭವಸಾಹಿತ್ಯ. ಅನುಭೂತ ವಿಷಯ. ಜನಪದ ಸಾಹಿತ್ಯದಲ್ಲಿ ಬಂದು ಜೀವನ ವಿಶ್ಲೇಷಣಶಕ್ತಿಯಿದೆ ಬಾಳಬಗೆಯ ಬೆಸುಗೆಯಿದೆ. ವಾಸ್ತವಿಕತೆ ಸ್ವಾಭಾವಿಕತೆಗಳನ್ನು ಜನಪದ ಸಾಹಿತ್ಯದಲ್ಲಿ ಕಾಣುತ್ತೇವೆ ನಿಜ

ವಾದ ಜೀವನ ಶಿಕ್ಷಣ ಜನಪದ ಸಾಹಿತ್ಯದಲ್ಲಿ ಸಿಕ್ಕುತ್ತದೆ. ಸಹಜವಾದ ಸ್ವಾನುಭವ, ಸತ್ಯನಿಷ್ಠಾ ಜೀವಾನುಭವಗಳ ತವರು ಜನಪದ ಸಾಹಿತ್ಯ.

ಕಾಣದ ಆ ದೇವಾನಂದವನ್ನೇ ಮೀಸಲಾಗಿ ಚಿತ್ತರಿಸಿ ಹೊರಟಿವೆ ಋಷಿ ಸಾಹಿತ್ಯ. ಕಾಣುವ ಈ ಜೀವಾನಂದವನ್ನು ಕರತಲಾಮಲಕ ಮಾಡಿಕೊಡುತ್ತದೆ. ಈ ಜನಜೀವನ ಸಾಹಿತ್ಯ. ಪ್ರಪಂಚಕ್ಕೂ ಪರಮಾರ್ಥಕ್ಕೂ ಪ್ರಯೋಜನಕಾರಿಯಾಗಿ ಪ್ರಾದುರ್ಭವಿಸಿದೆ ಜನಪದ ಸಾಹಿತ್ಯ. ನೈಸರ್ಗಿಕ ಜೀವನ ನೈಜಚಿತ್ರವನ್ನು ಪಾತ್ರವನ್ನು ಕಾಣಬೇಕಾದರೆ ಜನಪದ ಸಾಹಿತ್ಯದಲ್ಲಿ ಸಾಧ್ಯ.

ಜೀವನದ ಮತ್ತು ಜಗದ ರಸಾನುಭೂತಿಯನ್ನು ಕಾಣಬೇಕು. ಇದರಲ್ಲಿ ಕೃತಕವಾದ ನಾಗರಿಕ ಜೀವನವನ್ನುಳಿದು ಹಳ್ಳಿಗರ ಸಹಜ ಜೀವನ ಸೌಂದರ್ಯ ಭಾಂಡಾರ ಜನಪದ ಸಾಹಿತ್ಯ. ಕೇವಲ ರಾಜಾಧಿರಾಜರ ಜೀವನವನ್ನೇ ಬಣ್ಣಿಸುವ ಕವಿಕೃತ ಕಾವ್ಯಗಳಲ್ಲಿ ನಿಸರ್ಗ ಜೀವನ ನಿಜಸೌಂದರ್ಯದ ಅಭಾವ ಅಪೇಕ್ಷ್ಯಾದರೂ ಇರುತ್ತದೆಂಬುವನ್ನು ಬೇರೆ ಹೇಳಬೇಕಾಗಿಲ್ಲ. ಜನಸಾಮಾನ್ಯರ ಮನತಣಿಸುವ ಜನಜೀವನವನ್ನೇ ಹಾಡುವ ಸಾಹಿತ್ಯ ಜನಪದಸಾಹಿತ್ಯ. ತನ್ನದನ್ನೆ ತನ್ನ ನಾಡಿನಲ್ಲಿ ಎರಕವಾಗಿಸಬಲ್ಲ ಜಾನಪದ ಸಾಹಿತಿ. ಆತನ ಆ ಸಾಹಿತ್ಯದಲ್ಲಿ ತನ್ನದೆ ಭಾಷೆ, ತನ್ನದೆ ಶೈಲಿ, ತನ್ನದೆ ಭಾವ ತುಂಬಿರುತ್ತದೆ. ತಂತಮ್ಮ ಭಾವಾನುಭಾವಗಳನ್ನು ತಂತಮ್ಮದೆ ಆದ ಭಾಷೆಯಲ್ಲಿ ರಾಗದಲ್ಲಿ ಹಾಡಿದ ಸಾಹಿತ್ಯದಲ್ಲಿ ನಿಸರ್ಗತೆಗೆ ನೈಜತೆಗೆ ಕೊರತೆಯೆಂದರೇನು ?

ಕನ್ನಡನಾಡಿನ ಜನಪದ ಸಾಹಿತ್ಯ ಚಿನ್ನದ ಗಣಿಯೊಳಗಿನ ಮಣ್ಣು. ಆ ಮಣ್ಣಿನಲ್ಲಿ ಹೊನ್ನು ಹುದುಗಿದೆ. ಬಾಳ್ವೆಗೆಗಳ ಬಣ್ಣವಿದೆ. ಅಂತೆಯೆ ಅದಕ್ಕೆ ಬೆಲೆಯಿದೆ.

ಮಾನವ ಪ್ರಕೃತಿಯು ಅಥವಾ ಸ್ವಭಾವದ ಕೈಗೂಸು. ಆ ಸ್ವಭಾವಸೂತ್ರದಲ್ಲಿ ಆತನ ಬಹ್ವಂಶ ಜೀವನ ಸಾಗಿರುತ್ತದೆ. ಆ ಸ್ವಾಭಾವಿಕ ಜೀವನದ ಸ್ವಾನುಭವಗಳನ್ನು ಸ್ವಾಭಾವಿಕವೂ ಸುಂದರವೂ ಆದ ಶೈಲಿಯಲ್ಲಿ ಚಿತ್ರಿಸಿ ಚಲುವಾಗಿ ತೋರಿಸುವ ಕುಸುರಿ ಕೆಲಸಮಾಡಿವೆ ಜಾನಪದ ಸಾಹಿತ್ಯ. ಇದು ತನ್ನ ಶೈಲಿಯಿಂದ ಶ್ರವಣ ತಣಿಸುತ್ತದೆ. ಶಬ್ದಚಿತ್ರಣದಿಂದ ಜೀವನ ಸೌಂದರ್ಯವ ತೋರಿ ಕಣ್ಣಣಿಸುತ್ತದೆ. ಭಾವಾಂತರಂಗಗಳಿಂದ ಶ್ರಾವಕರಹೃದಯವನ್ನು ಹರುಷದಲ್ಲಿ ಕುಣಿಸುತ್ತದೆ. ಈ ದಿಸೆಯಲ್ಲಿ ಕಲೆಯು ಮೂರಂಗ (ನೃತ್ಯ-ಚಿತ್ರ-ಗೀತೆ)ಗಳು ಇದರಲ್ಲಿ ಸೂಕ್ಷ್ಮವಾಗಿ ಅಡಕವಾದಂತಾಯಿತಲ್ಲವೆ ?

ಹಳ್ಳಿಯ ಹಾಡುಗಳಲ್ಲಿ ಕನ್ನಡವೇ ಆದ ಕೂಡನುಡಿಗಳವು, ನಡೆ ನುಡಿಗಳು, ತನಿಮಾತುಗಳು, ಅಲ್ಲಲ್ಲಿ ದೊರೆತು ನಾಲಿಗೆಗೆ ಸವಿಯನ್ನಾಡಿಸುತ್ತವೆ. ಬಗೆಗೆ ಸ್ಫೂರ್ತಿಯನ್ನು ಕರುಳಿಗೆ ಕುತೂಹಲವನ್ನು ಕೆರಳಿಸುತ್ತವೆ. ಹಳ್ಳಿಯ ಹಾಡುಗಳಲ್ಲಿ ಏನಿಲ್ಲ, ಏನುಂಟು ?—ಎಂದು ಕೇಳಿದರೆ, ಅವುಗಳಲ್ಲಿ ಕವಿ ಕಾವ್ಯಕೃತ ಕತೆಯಿಲ್ಲ. ಸಹ ಮತ್ತು ಸರಸ ಬಾಳಿನ ಬಣ್ಣ-ಬಗೆಗಳುಂಟು. ಹಳ್ಳಿಯ ಹಾಡುಗಳು ತಾತ್ಕಾಲಿಕ ಕಾವಗಳಂತೆ ತನ್ನು ನುಡಿಗಳಲ್ಲಿ ಕಾವ್ಯಕರ್ತೃವಿನಲ್ಲಿ ಇಲ್ಲವಸಲ್ಲದ ಗುಣಗಳನ್ನು ನಡೆಗಳನ್ನು ತುಂಬುವಂತೆ ತುಂಬುವುದಿಲ್ಲ. ಇವು ಕರ್ತೃವಿನ ನೈಜ ನಡೆಗಳಲ್ಲಿ ತನ್ನು ಸರಳ ನುಡಿಗಳನ್ನು ತುಂಬುತ್ತದೆ. ಇದರಿಂದಾಗಿ ಇವುಗಳಲ್ಲಿ ಜೀವನಚಿತ್ರ ಸಹಜವಾಗಿ ಸುಂದರವಾಗಿ ಚಿತ್ರಿತವಾಗುತ್ತದೆ. ಕೃತಕಾಲಂಕಾರಗಳ ಭಾರವಿಲ್ಲ. ಬಳಿಕೆಯುಲ್ಲಿಲ್ಲದ ಕಠಿಣ ಶಬ್ದಕೋಶವಿಲ್ಲ.

ಇಂತಹ ಜನಪದ ಸಾಹಿತ್ಯವಾದ ಹಳ್ಳಿಯ ಹಾಡುಗಳನ್ನು ಹೃದಯಂಗಮವಾಗಿ ಹಾಡುವುದು ಎಷ್ಟು ಸೊಗಸೋ ಅಷ್ಟೇ-ಅದೇಕೆ ಹೆಚ್ಚಾಗಿ ಕೂಡು ಹಾಕುವುದು ಸೊಗಸು, ಮತ್ತು ಸಾರ್ಥಕ,—ಮಾಲೆಗಾರನು ಬಿಡಿಹೂವುಗಳನ್ನು ಕೂಡುಹಾಕಿ ಕಟ್ಟಿದಂತೆ! ಮಾನವ ಜೀವನದಲ್ಲಿ ಸಂಪಾದನೆ ಹಲವಾರಿವೆ. ಅವುಗಳಲ್ಲಿ ಸಾಹಿತ್ಯ ಸಂಪಾದನೆ ಶ್ರೇಷ್ಠ. ಸಂಪಾದಿಸಿದ ಸಾಹಿತ್ಯವೆಲ್ಲವೂ ಶ್ರೇಷ್ಠವಲ್ಲ, ಸಂಪಾದಿಸುವವರು ಸಮೀಕ್ಷಿಸಿ ಸರಿಯಾದ ಸಾರಭೂತವಾದ ಸಂಪಾದನೆಯ ಮಾಡಬೇಕು. ಹಳ್ಳಿಯ ಹಾಡುಗಳಲ್ಲಿ ಹೃದಯಂಗಮ

ಗಳನ್ನೆ ಸಂಕಲನ ಮಾಡಬೇಕು. ಹೆಚ್ಚಾಗಿ ಕಲೆ ಹಾಕಿದರೆ ಅದೊಂದು ಹೆಚ್ಚುಗಾರಿಕೆಯಲ್ಲ. ಯೋಗ್ಯತೆಗೆ ಬಹು ಸಂಖ್ಯೆ (ಸಂಪಾದನೆ) ಮುಖ್ಯವಲ್ಲ. ಹಾಡುಗಳಲ್ಲಿರುವ ಗುಣ ಅಂದರೆ ರಸಭಾವ ಅನುಭಾವಾದಿಗಳೆ ಕಾರಣ! ವಾಸ್ತವಿಕತೆಯೆ. ವಿಶಿಷ್ಟಕಾರಣ! ಹೃದಯ ಸತ್ವವಿಲ್ಲದ ಹಾಡುಗಳ ಹಿಂಡು ಹೃದಯಕ್ಕೆ ಪರಿಣಾಮಕಾರಿಯಾಗದು ಪ್ರತಿಯಾಗಿ ಹೊರೆಯಾದೀತು, ಆಗುತ್ತದೆ.

ಹೃದಯಂಗಮವಾದ ಹಾಡುಗಳನ್ನು ಕೂಡ ಹಾಕಿದ ಕೃತಿ ಒಂದು ಕಲಾಕೃತಿಯಾಗಿ ಹೊರಬಲ್ಲುದು. ಗಾಯಕರ, ಶ್ರಾವಕರ, ವಾಚಕರ ತಣಿಸಬಹುದ . ಆಗ ಸಂಗ್ರಾಹಕರ ಶ್ರಮ ಸಾರ್ಥಕ, ಸಂಗ್ರಹಣ ದೃಷ್ಟಿ ದೂರದರ್ಶಕ, ಭಾವಗ್ರಾಹಕ.

ಒಬ್ಬರು ಗಮಕವಾಗಿ ಹಾಡಿದ್ದನ್ನು ಒಮ್ಮೆ ಕಿವಿಯಿಂದ ಕೇಳಿ ಬಿಡುವದಕ್ಕಿಂತ ಕೃತಿರೂಪದಲ್ಲಿ ಸಂಗ್ರಹವಾಗಿ ಬಂದುದನ್ನು ಸ್ವತಃ ಓದಿ ಆನಂದಿಸಬಹುದು. ಮತ್ತು ಕನ್ನಡಿಗರ ಭಾವಾನುಭಾವಗಳ ರಸಫಲಗಳನ್ನು ಸ್ವತಃ ಸವಿದು ಸಂತೃಪ್ತರಾಗಬಹುದು, ಸ್ವಾಭಿಮಾನವ ತಳೆಯಬಹುದು. ಹಿಂದಿನ ಹಿರಿಯರ ಹೃದಯ ಪೂರ್ಣ ಭಾವಗಳನ್ನು ಅರಿತು ಅವುಗಳೊಡನೆ ಬೆರೆತು ಆನಂದಾನುಭೂತಿಗಳ ಪಡೆವುದಕ್ಕಿಂತ ಬೇರೆ ಭಾಗ್ಯವುಂಟೆ? ಅಷ್ಟೊಂದು ಹೊತ್ತಾದರೂ ನಮ್ಮ ಬಾಳ ಬದುಕಿನ ಕೊರಗು ಕೊರತೆಗಳನ್ನು ಮರೆತು ನಾವು ನಾವಾಗಿರುವದಕ್ಕಿಂತ ಮಿಗಿಲು ಮುಕ್ತಿಯುಂಟೆ ?

ಸಾಂಸಾರಿಕ ಜೀವನ ಮತ್ತು ಸಾಮಾಜಿಕಜೀವನ ಇವೆರಡು ಸ್ಪರ್ಧಾಮಯ ಜೀವನ, ಸಂಘರ್ಷಣ ಜೀವನ, ರಸ-ನೀರಸ ಸಮ್ಮಿಶ್ರ ಜೀವನ, ಶುದ್ಧ ಸಾಹಿತ್ಯ ರಸಾತ್ಮಕವಾದುದು, ರಂಜನಾತ್ಮಕವಾದುದು.

ಸಂಸಾರಿಕ, ಸಾಮಾಜಿಕ, ರಾಜಕೀಯ ಕ್ಷೇತ್ರಗಳಲ್ಲಿ ಅರ್ಹತೆ-ಅರುಹುಗಳನ್ನು ತರಬಲ್ಲುದು ಸಾಹಿತ್ಯ. ಅವುಗಳಲ್ಲಿ ಮನಕ್ಕೆ ಆದ ಕುಂದುಕೊರತೆಗಳನ್ನು ತುಂಬಿ ತರಬಲ್ಲುದು ಸಾಹಿತ್ಯ. ಆ ತ್ರಿವಿಧ ಕ್ಷೇತ್ರಗಳಲ್ಲಿ ಜೀವನದಲ್ಲಿ ನೊಂದ ಬೆಂದ ಹೃದಯಕ್ಕೆ ಹಿತವನ್ನು ತರಬಲ್ಲ ಸಮೀಪದ ಸ್ನೇಹಿತನೆಂದರೆ ಸಾಹಿತ್ಯ. ಸತ್ಯಸಂದೇಶ ಬೀರಿ ಸಚ್ಚಿದಾನಂದಕ್ಕೆ ಕರೆದೊಯ್ಯುವ ಸಂತನೆಂದರೆ ಶುದ್ಧ ಸತ್ವಸಾಹಿತ್ಯ.

---

# ಹಳ್ಳಿಯಲ್ಲಿ ದಿಲ್ಲಿಯ ಯೋಜನೆ



ಲೇಖಕರು :

ರಾಜೀವ

ಮೈಸೂರು-4
ದಿನಾಂಕ 10-2-1962

ಜಿಲ್ಲಾಧಿಕಾರಿಗಳ ಕಛೇರಿಯಿಂದಾ
ಮೈಸೂರುಜಿಲ್ಲಾ

ಎಸ್. ರಾಮಣ್ಣ
son of ಶಾಮರಾವ್
ಪುಲಿಗೆರೆ
ಹಾಸನ ಜಿಲ್ಲಾ

ನಿನ್ನನ್ನು ಕಸಬಾ ತಾಲ್ಲೂಕು ಆನಂದೂರಿನ ಗ್ರಾಮಸೇವಕನಾಗಿ ನಿಯಮಿಸಲಾಗಿದೆ. ಈ ಆರ್ಡರ್ ತಲುಪಿದ ಒಂದು ವಾರದೊಳಗಾಗಿ ಕೆಲಸದ ಮೇಲೆ ಹಾಜರಾಗಿ ಪಂಚಾಯಿತಿ ಛೇರ್ಮನ್‌ರವರನ್ನು ಕಂಡು ಬ್ಲಾಕ್ ಡೆವಲಪ್‌ಮೆಂಟ್ ಆಫೀಸರಿಗೆ ಡ್ಯೂಟಿ ರಿಪೋರ್ಟ್ ಮಾಡಿಕೊಳ್ಳತಕ್ಕದ್ದು. ತಪ್ಪಿದಲ್ಲಿ ಈ ಆರ್ಡರು ರದ್ದಾಗುತ್ತದೆ.

[ಸಹಿ] ತಿಮ್ಮೇಗೌಡ
ಜಿಲ್ಲಾಧಿಕಾರಿ, ಮೈಸೂರು

ಎಸ್. ಎಸ್. ಎಲ್. ಸಿ. ಪರೀಕ್ಷೆ ಮುಗಿಸಿ ಕೆಲಸಕ್ಕಾಗಿ ವರ್ಷಗಟ್ಟಲೆ ಅಲೆದು ಬೇಸತ್ತನಂತರ ಯಾರೋ ಪುಣ್ಯಾತ್ಮರು ಹೇಳಿದರೆಂದು ಗ್ರಾಮಸೇವಕನ ತರಬೇತಿಗಾಗಿ ಹೋಗಿದ್ದು ಎರಡು ವರ್ಷಗಳ ತರಬೇತಿಯನ್ನು ಯಶಸ್ವಿಯಾಗಿ ಮುಗಿಸಿ ಮನೆಗೆ ಬಂದ ಒಂದೇ ವಾರದಲ್ಲಿ ರಾಮಣ್ಣನಿಗೆ ಕೆಲಸದ ಆರ್ಡರ್ ಬಂದಿತ್ತು. ಆ ದಿನ ಅವನ ಬಡ ಕುಟುಂಬಕ್ಕಾದ ಸಂತೋಷ ಹೇಳತೀರದು. ಅವನ ತಾಯಿ ಪರಮಾನ್ನ ತಯಾರಿಸಿ ದೇವರಿಗೆ ನೈವೇದ್ಯವಿಟ್ಟು ತನ್ನ ಮಗನಿಗೆ ಕೆಲಸ ದೊರಕಿಸಿ ಕೊಟ್ಟದ್ದಕ್ಕಾಗಿ ದೇವರಿಗೆ ತಮ್ಮ ಕೃತಜ್ಞತೆಯನ್ನು ಸಮರ್ಪಿಸಿ ಮನೆಯವರೆಲ್ಲರ ಬಾಯಿ ಸಿಹಿ ಮಾಡಿದ್ದರು.

ಸದ್ಯ ಕೆಲಸವೊಂದು ಸಿಕ್ಕಿದರೆ ಸಾಕು ಎಲ್ಲಿಗೆ ಬೇಕಾದರೂ ಹಾರಿಹೋದೇನು ಎನ್ನುವ ಸ್ಥಿತಿಯಿರುವಾಗ ಒಂದು ವಾರದ ಒಳಗಾಗಿ ಎಂಬ ಎಚ್ಚರಿಕೆಯ ಅವಶ್ಯಕತೆಯೇ ಇರಲಿಲ್ಲ. ಅದೇ ಮಧ್ಯಾಹ್ನ ರಾಮಣ್ಣ ತನ್ನ ಪ್ರಶಸ್ತಿ ಪತ್ರಗಳನ್ನೆಲ್ಲಾ ಜೋಡಿಸಿಕೊಂಡು ಪುಲಿಗೆರೆಯಿಂದ ಮೈಸೂರಿಗೆ ಹೋಗುವ ಬಸ್ಸನ್ನೇರಿಯೇ ಬಿಟ್ಟನು. ಬಸ್ಸು ರಾತ್ರೆ 8 ಘಂಟೆಯ ವೇಳೆಗೆ ಮೈಸೂರನ್ನು ತಲುಪಿತು. ರಾಮಣ್ಣನು ಬರುತ್ತಾನೆಂದು ಮೈಸೂರಿನಲ್ಲಿ ಯಾರೂ ಕಾಯ್ತಿದ್ದಾರು. ತನ್ನ ಒಂದೆರಡು ಬಟ್ಟೆಗಳು, ಕಾಗದ ಪತ್ರಗಳಿಂದ ತುಂಬಿದ್ದ ಕೈಚೀಲ ಹಿಡಿದು ಮೈಸೂರಿನ ಸುಂದರವಾದ ಬೀದಿಗಳಲ್ಲಿ ಸುತ್ತಾಡಿದನು. ಹೊಟ್ಟೆ ಚುರುಗುಟ್ಟಿತು. ಅಲ್ಲಿಯೇ ಇದ್ದ ಉಡುಪಿ ಹೋಟೇಲಿಗೆ ಹೋಗಿ ಊಟಮಾಡಿದ ಮೇಲೆ ತುಸು ನೆಮ್ಮದಿಯುಂಟಾಯಿತು ಇನ್ನೂ ಒಂದು ಘಂಟೆಯ ಕಾಲ ವಿದ್ಯುದ್ದೀಪಗಳಿಂದ ಝಗಝಗಿಸುವ ಮೈಸೂರಿನ ಭವ್ಯ ಬೀದಿಗಳ ಸುತ್ತಾಟ ನಡೆಸಬಹುದೆಂಬ ಹುರುಪುಂಟಾಯಿತು. ಅದೇ ಉತ್ಸಾಹದಲ್ಲಿ ಮನ್ನಪೇಟೆ ಮಾರ್ಕೆಟ್ಟಿನ ಮೂಲೆಗೆ ಬಂದಾಗ ಹುಡುಗನೊಬ್ಬ ಮೈಸೂರು ಪತ್ರಿಕೆ ಮಾರುತ್ತಿದ್ದ. ಸಂಜೆಯ ಪತ್ರಿಕೆ ದಿನದ ವಿಶೇಷ ಸುದ್ದಿಗಳೇನೆಂದು

ನೋಡುವಾ ಎಂದು ನಾಲ್ಕು ಪೈಸೆ ಕೊಟ್ಟು ರಾಮಣ್ಣ ಪತ್ರಿಕೆಯನ್ನು ಕೊಂಡನು.

ಮೈಸೂರು ಪತ್ರಿಕೆಯಲ್ಲಿ ರಾಮಣ್ಣನ ಪಾಲಿಗೆ ಭಯಂಕರ ಸುದ್ದಿಯೊಂದು ಪ್ರಕಟವಾಗಿದ್ದಿತು. ಗ್ರಾಮಸೇವಕನ ಆತ್ಮಹತ್ಯೆ ಎಂಬ **ತಿರೋನಾಮೆಯಡಿ** ಯಲ್ಲಿ ಕೆಂಪಾಪುರದ ಸುದ್ದಿಯೊಂದು ಪ್ರಕಟವಾಗಿದ್ದಿತು—

ಕೆಂಪಾಪುರಸರ್ಕಲ್ಲಿನ ಗ್ರಾಮಸೇವಕರಾಗಿ ಕೆಲಸ ಮಾಡುತ್ತಿದ್ದ ಚನ್ನೆಗೌಡರೆಂಬ ಸುಮಾರು ಮೂವತ್ತು ವರ್ಷ ವಯಸ್ಸಿನ ತರುಣರೊಬ್ಬರು ಈ ದಿನ ಬೆಳಗ್ಗೆ ತಮ್ಮ ಇಲಾಖಾಗೃಹದಲ್ಲಿ ಪತ್ನಿ ಹಾಗೂ ಇಬ್ಬರು ಮಕ್ಕಳೊಡನೆ ಆತ್ಮಹತ್ಯೆ ಮಾಡಿಕೊಂಡಿರುವರೆಂಬ ಹೃದಯವಿದ್ರಾವಕ ಸುದ್ದಿ ಬಂದಿದೆ. ಈತನು ಈಗ್ಗೆ ಎರಡು ವರ್ಷಗಳ ಹಿಂದೆ ಕೆಂಪಾಪುರದ ಗ್ರಾಮ ಸೇವಕನಾಗಿ ನಿಯಮಿತನಾಗಿದ್ದು ಬಹಳ ಉತ್ಸಾಹದಿಂದ ಕೆಲಸ ಮಾಡುತ್ತಿದ್ದರೆಂದೂ ಕೇವಲ ಆರು ತಿಂಗಳ ಕೆಳಗೆ ತಮ್ಮ ಪತ್ನಿ ಪುತ್ರಾದಿಗಳನ್ನು ಇಲಾಖೆಯವರು ಕಟ್ಟಿಸಿ ಕೊಟ್ಟ ಕ್ವಾರ್ಟರ್ಸಿನಲ್ಲಿ ವಾಸಕ್ಕೆ ಕರೆದುತಂದರೆಂದೂ ತಿಳಿದು ಬಂದಿದೆ. ಈ ದಿನ ಬೆಳಗ್ಗೆ 10 ಘಂಟೆಯ ವರೆಗೂ ಅವರ ಮನೆಯ ಬಾಗಿಲು ನೂಕಿದಾಗ ಎಲ್ಲರೂ ಹಾಸಿಗೆಗಳಲ್ಲಿ ಮಲಗಿರುವುದು ಕಂಡು ಬಂದಿತೆಂದೂ ಅವರು ಗಾಬರಿಯಿಂದ ಇತರರಿಗೆ ತಿಳಿಸಲು ಗ್ರಾಮಾಧಿಕಾರಿಗಳಿಗೂ ಸುದ್ದಿ ತಲುಪಿ ಅವರುಗಳು ಬಂದು ಮಹಜರ್ ನಡೆಸಿದಾಗ ಅಲ್ಲಿಯೇ ಇದ್ದ ಚೀಟಿಯೊಂದರಲ್ಲಿ 'ಇದು ಆತ್ಮಹತ್ಯಾಪ್ರಕರಣವೆಂದೂ ಯಾರೂ ಇದಕ್ಕೆ ಮಹತ್ವ ಕೊಡಬಾರದೆಂದು' ಸೂಚಿಸಲಾಗಿತ್ತೆಂದೂ ತಿಳಿದು ಬಂದಿದೆ. ಸ್ವಂ. ಸು.

ಇದನ್ನು ಸಾವಿರಾರು ಮಂದಿ ಓದಿದ್ದರು. ಎಲ್ಲರೂ ಇದೊಂದು ಈಗಿನ ಕಾಲದಲ್ಲಿ ಸರ್ವೇ ಸಾಮಾನ್ಯ ಘಟನೆಯೆಂದು ಅದಕ್ಕಾವ ಮಹತ್ವವನ್ನೂ ಕೊಟ್ಟಿರಲೇ ಇಲ್ಲ. ಆದರೆ ರಾಮಣ್ಣನ ಪಾಲಿಗೆ ಅದು ಎದೆ ನಡುಗುವ ಸುದ್ದಿಯಾಗಿತ್ತು. ಛೆ! ಇದೆಂತಹ ಅನಿಷ್ಟ ಸುದ್ದಿ ಬಂದಿದೆ ಇದರಲ್ಲಿ. ಅಪಶಕುನ. ಆತನ ಈ ದಾರುಣ ಕೃತ್ಯಕ್ಕೆ ಕಾರಣವೇನಿರಬಹುದು? ಅಯ್ಯೋ! ಪ್ರಾಣ ಅಂತಹ ಪುಟ್ಟ ಸಂಸಾರ ನಿನಗೇಕೆ ಬೇಸರವಾಯಿತು ಸಂಬಳ ಸಾಲದೆಂದೇ? ಆ ಹಳ್ಳಿಯಲ್ಲಿ ಅಷ್ಟೂ ಗತಿಯಿಲ್ಲದವರು ಬದುಕಿಲ್ಲವೇ? ಕೆಲಸ ಕಷ್ಟವೆ? ಅಧಿಕಾರಿಗಳ ಕಿರುಕುಳವೆ? ಇದೇ ದಿನ ಈ ಸುದ್ದಿ ನನ್ನ ಕಣ್ಣಿಗೆ ಬಿದ್ದುದರ ಸಂಕೇತವೇನು? ಈ ಪ್ರಶ್ನೆಗಳ ಮಾಲೆ ರಾಮಣ್ಣನ ತಲೆ ಭಾರವಾಗಿಸಿತು. ಹಾಗೆಯೇ ಯೋಚಿಸುತ್ತ ನಡೆದು ದೂರದ ನೆಂಟರೊಬ್ಬರ ಮನೆಯಲ್ಲಿ ರಾತ್ರಿ ಮಲಗಲು ಸ್ಥಳ ಸಿಕ್ಕೀತೇನೋ ನೋಡುವ ಎಂದು ಹೊರಟನು.

ನೆಂಟರ ಮನೆಯಲ್ಲಿ ರಾಮಣ್ಣನಿಗೆ ಮಲಗಲು ಸ್ಥಳವೂ ಸಿಕ್ಕಿತು. ಅದಕ್ಕಿಂತ ಮಿಗಿಲಾಗಿ ಅವನ ತಲೆ ಕೊರೆಯುತ್ತಿದ್ದ ಪ್ರಶ್ನೆಗಳಿಗೆ ಸಮಾಧಾನಕರವಾದ ಉತ್ತರವೂ ದೊರೆತವು. ಕನ್ನಂಬಾಡಿಯ ಜಮಿನಾನುದಾರರಾಗಿದ್ದ ಅವರಿಗೆ ಕೆಂಪಾಪುರ ಚೆನ್ನಾಗಿ ತಿಳಿದಿದ್ದ ಊರು. ಅವರ ಐವತ್ತಾರು ವರ್ಷದ ಬದುಕಿನಲ್ಲಿ ಆ ಊರಿನಲ್ಲಾದ ಏಳು ಬೀಳುಗಳಲ್ಲಿ ಚನ್ನೇಗೌಡ ಕುಟುಂಬದ ದುರಂತ ನೂರಲ್ಲೊಂದು, ಕೆಂಪಾಪುರದಲ್ಲಿ ಛೇರ್ಮನ್ ಕೆಂಪಯ್ಯನ ಆಡಳಿತ ಇರುವವರೆಗೂ ಇಂತಹವುಗಳೆಷ್ಟೋ? ಛೇರ್ಮನ್ ಕೆಂಪಯ್ಯನೆಂದರೆ ಊರಿಗೆ ಊರೇ ಅಲ್ಲದೆ ಸುತ್ತಲ ಹತ್ತು ಗ್ರಾಮಗಳೂ ಗಡಗುಟ್ಟಿ ನಡುಗುತ್ತಿವೆ. ಕೆಂಪಯ್ಯ ಹೇಳಿದ್ದು ನಡೆದು ಹೋಗಬೇಕು. ಅವನಿಗೆ ಎದುರು ವಾದಿಸಿದವರಿಗೆ ಶಿಕ್ಷೆಯಾಗಲೇ ಬೇಕು. ಸರಕಾರಕ್ಕಾಗಲೀ, ಜನ ಸಾಮಾನ್ಯಕ್ಕಾಗಲೀ, ಕೆಂಪಯ್ಯ ಹೆದರಿದವನೇ ಅಲ್ಲ. ಅಂತಹ ಪರಿಸ್ಥಿತಿಯಲ್ಲಿ ಪಂಚವಾರ್ಷಿಕ ಯೋಜನೆಯ ಕೊನೆಯ ಮೆಟ್ಟಲಾಗಿ ಚೆನ್ನೇಗೌಡ ಕೆಂಪಾಪುರಕ್ಕೆ ಬಂದಿದ್ದನು. ಊರಿಗೆ ಬಂದ ಕೂಡಲೇ ಛೇರ್ಮನ್ನರನ್ನು ವಿಚಾರಿಸಿ ಊರಿಗೇ ದೊಡ್ಡ ಮನೆಯ ಮುಂದೆ ಬಂದು ನಿಂತನು. ಕೆಂಪಯ್ಯನವರು ಇದ್ದಾರೆಯೇ ಎಂದು ಹೊರಬಾಗಿಲು ಜಗಲಿಯ ಮೇಲೇ ಬೀಡಿ ಎಳೆಯುತ್ತ ಕುಳಿತವರೊಬ್ಬರನ್ನು ಚನ್ನೇಗೌಡ ಕೇಳಿದ್ದ. ಕೂಡಲೇ ಬಂದಿತು, ಸಿಡಿಲಿನಂಥಾ ಉತ್ತರ ''ಯಾರಯ್ಯಾ ನೀನು? ಕೆಂಪಯ್ಯನ ತಾವ್ ಏನೈತೆ ಕೆಲಸಾ? ಎದುರಿಗೇ ದೇವ್ರನಾಂಗ ಕುಳಿತೀನಿ. ಕೆಂಪಯ್ಯ ಇದ್ದಾರೆಯಾ ಎಂದು ಬೇರೆ ಪ್ರಶ್ನೆ ಹಾಕತೀ

ಯಲ್ಲಾ?" "ಓಹೋ! ನಮಸ್ಕಾರ ಸ್ವಾಮಿ. ಕ್ಷಮಿಸಬೇಕು. ನಾನು ಗ್ರಾಮ ಸೇವಕ ಚೆನ್ನೇಗೌಡ ಅಂತ ಹೆಸರು. ಈ ಊರಿನಲ್ಲಿ ಪಂಚವಾರ್ಷಿಕ ಯೋಜನೆಯಂತೆ ಕೆಲಸ ನಡೆಸಲು ಬಂದಿದ್ದೇನೆ- ತಮ್ಮಂ ತಹವರ ಪೂರ್ಣ ಸಹಕಾರ ಆವಶ್ಯಕ" "ಹಂಗಂದ್ರೆ ಈ ಊರ್ನಾಗೇ ಒಂದು ಕುಳವಾಯ್ತೀ ಅನ್ನು. ಶ್ಯಾನು ಭಾಗನಂಗೇ ರಿಕಾರ್ಲ್ಡ್ ಗಿಕಾಲ್ಡ್ ಮಾಡ್ಕಂಡು ಇರ್‍ತೀ ಅನ್ನಪ್ಪ. ಊ. ಇರು ಇರು. ಆದರೆ ಈಗಲೇ ಹೇಳ್ತೀನ್ನೋಡು ತಂಟೆ ತಕರಾರ್ ಸುರೂ ಅಚ್ಚದ್ರೆ ಕೆಂಪಯ್ಯನ ತಾವೆ ನಡುಯೋಕಿಲ್ಲ. ವಿನಂತೀ"

ಛೇ ಛೇ! ಅವಕಾಶವಿಲ್ಲಾ ಸ್ವಾಮಿ. ನಮ್ಮ ಕೆಲಸ ವೆಂದರೆ ಗ್ರಾಮದಲ್ಲಿ ಎಲ್ಲ ಜನರೂ ಪರಸ್ಪರ ಸಹಕಾರ ಸಂಘಗಳನ್ನು ಸ್ಥಾಪಿಸಿ ತಮ್ಮ ಉತ್ಪಾದನೆಯ ವಸ್ತು ಸರಿಯಾದ ಬೆಲೆಗೆ ಮಾರಾಟವಾಗುವಂತೆಯೂ, ತಮಗೆ ಅವಶ್ಯಕವಾದ ವಸ್ತುಗಳು ಸರಿಯಾದ ನಿಖರ ಬೆಲೆಗೆ ದೊರಕುವಂತೆಯೂ ಮಾಡಿಕೊಳ್ಳುವುದು. ಹೊಲ ಗದ್ದೆಗಳಿಗಾಗಿ ಕಾಂಪೋಸ್ಟ್ ಗುಂಡಿಗಳನ್ನು ತೆಗೆಸು ವುದು. ಉತ್ತಮ ಬೀಜವನ್ನೊದಗಿಸಿ ಹುಲುಸಾದ ಬೆಳೆ ತೆಗೆಯುವ ವಿಧಾನದಂತೆ ವ್ಯವಸಾಯ ಮಾಡಿಸು ವುದು. ಉತ್ತಮ ಬೀಜವನ್ನೊದಗಿಸಿ ಹುಲುಸಾದ ಬೆಳೆ ತೆಗೆಯುವ ವಿಧಾನದಂತೆ ವ್ಯವಸಾಯ ಮಾಡಿಸು ವುದು ಇಂತಹವು."

"ಹ! ಸರಿ. ಅದೇನೋ ಮಾಡಪ್ಪ ನೋಡಾನ" ಎಂದು ಮುಗಿಸಿದ್ದ ಕೆಂಪಯ್ಯ. ಆದರೂ ಈ ಸರ್ಕಾರೀ ಮನುಷ್ಯ ಈ ಊರಲ್ಲೇ ಸದಾ ಇರುವುದೆಂದರೆ ತನಗೆ ತೊಂದರೆಯಲ್ಲವೆ? ಜನರನ್ನ ಇವನೆದುರೇ ನನಗೆ ತೋಚಿ ದಂತೆ ನಡೆಸಿಕೊಳ್ಳಲು ಸಾಧ್ಯವಾದೀತೆ? ನನಗೆ ಅನು ಕೂಲವಾಗಿ ಈ ಹೈದ ನಡಿದಾನೇ ಎಂದೆಲ್ಲಾ ಯೋಚನೆ ಕೆಂಪಯ್ಯನಿಗೆ ಬಂದಿತ್ತು. ಅವನು ಊಹಿಸಿದಂತೇ ಮುಂದೆ ಒಂದೇ ವಾರದಲ್ಲಿ ಕೆಂಪಯ್ಯನಿಗೆ ಪೀಕಲಾಟ ಪ್ರಾಪ್ತವಾಗಿತ್ತು. ಆ ದಿನ ಕಂದಾಯ ವಸೂಲಿಗೆ ತಹ ಸೀಲ್ದಾರರೇ ಕೆಂಪಾಪುರಕ್ಕೆ ಬಂದಿದ್ದರು. ಕಂದಾಯ ಮೂರು ವರ್ಷಗಳಿಂದ ಬಾಕಿ ಉಳಿಸಿಕೊಂಡಿದ್ದವರನ್ನು ಖುದ್ದು ಕರೆಸಿ ವಿಚಾರಿಸುತ್ತಿದ್ದರು. ಅಂತಹ ಬಾಕೀ ದಾರರಲ್ಲಿ ಕೆಂಪಯ್ಯನೂ ಒಬ್ಬನಾಗಿದ್ದ. ಆತನನ್ನು ಕರೆಸುವಂತೆ ತಹಸೀಲ್ದಾರರು ಅಪ್ಪಣೆ ಕೊಟ್ಟಾಗ ತಳ ವಾರ ಹೇಳಿದ್ದ "ಯಾರು ಕರೆದರೂ ಅವರು ಬರೋದಿಲ್ಲ ಸ್ವಾಮಿ. ನಮಗೇ ಗ್ರಹಚಾರ ಬಿಡಿಸಿಬಿಡ್ತಾರೆ". ಹಾಗಾದ್ರೆ ಏನು ಆತ ಪಾಳೆಯಗಾರನೇನು? ಏ, ಕಾನ್ ಸ್ಟೇಬಲ್ ಹೋಗಿ ಕರೆದುತಾರಯ್ಯ ಆತನನ್ನ. ಎಂದು ಅಪ್ಪಣೆ ಮಾಡಿದರು. ಹತ್ತೇ ನಿಮಿಷದಲ್ಲಿ ಅಲ್ಲಿಂದ ಉತ್ತರ ಬಂದಿತ್ತು "ಬರಲ್ವಂತೇ ಅಂತ ಹೇಳು". ತಹ ಸೀಲ್ದಾರರು ಇಬ್ಬರು ಕಾನ್‌ಸ್ಟೇಬಲ್‌ಗಳಿಗೆ ಆತನನ್ನು ಎಳೆದು ತರುವಂತೆ ಅಪ್ಪಣೆ ಮಾಡಿದರು. ಕೆಂಪಯ್ಯ ಇಬ್ಬರನ್ನೂ ಥಳಿಸಿ ಕಳುಹಿಸಿದ್ದನು. ತಹಸೀಲ್ದಾರರು ಅದನ್ನ ರಿಕಾರ್ಡ್ ಮಾಡಿಕೊಂಡು ಮುಂದಿನ ಕ್ರಮ ಜಾರಿಮಾಡಲು ಹೊರಟು ಹೋದರು. ಅದಕ್ಕೆ ಸಾಕ್ಷಿ ಹಾಕಲು ಗ್ರಾಮಸ್ಥರಾರೂ ಮುಂದೆ ಬರಲಿಲ್ಲ. ಚೆನ್ನೇ ಗೌಡ ಒಬ್ಬನೇ ಅದಕ್ಕೆ ಸಾಕ್ಷಿದಾರನಾಗಬೇಕಾಯಿತು. ಸಾಲದ್ದಕ್ಕೆ ಅಂದೇ ರಾತ್ರಿ ಗ್ರಾಮಸ್ಥರ ಸಭೆ ಸೇರಿಸಿ ಕೆಂಪಯ್ಯನಂತಹ ಊರಿಗೇ ದೊಡ್ಡ ಕುಳಗಳು ಹೀಗೇ ಸರಕಾರಕ್ಕೆ ವಿರೋಧವಾಗಿ ನಡೆಯಬಾರದೆಂದೂ, ಇದ ರಿಂದ ದೇಶಕ್ಕೆ ಬಹಳ ಕೆಡಕಾಗುತ್ತದೆಯೆಂದೂ ತಿಳಿಸಿ ಚೆನ್ನೇಗೌಡ ಭಾಷಣ ಮಾಡಿದ್ದ. ಇದು ಕೆಂಪಯ್ಯನಿಗೆ ಸಹನವಾಗಲಿಲ್ಲ. ಅವನು ಕೂಡಲೇ ಈ ಗ್ರಾಮಸೇವ ಕನು ತನ್ನ ದಾರಿಯಲ್ಲಿ ಮುಳ್ಳಾಗಲಿರುವನು ಎಂದು ಗ್ರಹಿಸಿದನು. ಮರುದಿನ ಬೆಳಿಗ್ಗೆ ಕೆಂಪಯ್ಯ ಚೆನ್ನೇ ಗೌಡನನ್ನು ಕರೆಸಿ ಚೆನ್ನಾಗಿ ಛೀಮಾರಿ ಮಾಡಿ, ಇಂತಹ ದಕ್ಕೆಲ್ಲ ಕೈ ಹಾಕಿದ್ರೆ ಮೂಳೆ ಕೂಡ ಉಳಿಯಾಕಿಲ್ಲ ಎಂದು ಬೆದರಿಸಿದ್ದನು. ಆದರೆ ಚೆನ್ನೇಗೌಡನೂ ಹೆದ ರದೆ ಜನರಿಗೆ ಒಳ್ಳೆಯದಕ್ಕಾಗಿ ಸರ್ಕಾರ ತಮ್ಮಿಂದ ಕಂದಾಯ ಪಡೆಯುತ್ತಿದೆ. ಅದನ್ನ ಸರಿಯಾಗಿ ಪಾವತಿ ಮಾಡದಿದ್ದರೆ ನಿಮ್ಮ ಗ್ರಾಮದ ಸೌಕರ್ಯ ಮೂಲೆ ಗುಂಪಾಗುತ್ತದೆ ಅಲ್ಲದೆ ಸರ್ಕಾರಿ ಅಧಿಕಾರಿಗಳನ್ನು ಗೌರವಿಸುವುದಿರಲಿ, ಅಧಿಕಾರ ಚಲಾಯಿಸುತ್ತಿರುವಾಗ ನೀವು ಶಿಕ್ಷೆ ಮಾಡಿಸಿದ್ದು ದೊಡ್ಡ ಅಪರಾಧವಾಗುತ್ತದೆ. ನಾಳೆ ಕೋರ್ಟಿನಲ್ಲಿ ಈ ಪ್ರಕರಣದ ವಿಚಾರಣೆಗೆ ಬಂದಾಗ ತಪ್ಪದೇ ನಿಮಗೆ ಶಿಕ್ಷೆಯಾಗುತ್ತದೆ. ಈ ನಡ ವಳಿಕೆಯಿಂದೇನೂ ಹಿತವಿಲ್ಲ, ಎಂದೇ ಉಪದೇಶ ಮಾಡಿ ದ್ದನು. ಇದರಿಂದ ಕೆಂಪಯ್ಯನ ಕೋಪ ಭುಗಿಲೆಂದಿತು ಆದರೆ ಅವನು ಚೆನ್ನೇಗೌಡನ ಮೇಲೆ ಕಾರ್ಯಕ್ರಮ ಕೈ ಗೊಳ್ಳುವುದರಲ್ಲಿ ಪೋಲೀಸರು ಬಂದು ಕೆಂಪಯ್ಯನನ್ನು

ಅರೆಸ್ಟ್‌ಮಾಡಿ ಕರೆದೊಯ್ದಿದ್ದರು. ಆ ಕೇಸಿನ ವಿಚಾರಣೆಯಾಗಿ ಎರಡುವರ್ಷ ಶಿಕ್ಷೆಯಾಗಿತ್ತು.

ಮೊದಲೇ ಕೋತಿ, ಅದಕ್ಕೆ ಹೆಂಡ ಬೇರೆ ಕುಡಿಸಿದಹಾಗೆ ಕೆಂಪಯ್ಯನ ಶಿಕ್ಷೆ ಮುಗಿದ ಕೂಡಲೇ ತನ್ನ ಬಾಲ ಬಿಚ್ಚಿದ್ದ. ಆ ಎರಡು ವರ್ಷದ ಅವಧಿಯಲ್ಲಿ ಚೆನ್ನೇಗೌಡ ಮಾಡಿಸಿದ ಕೆಲಸ ಕಾರ್ಯಗಳೆಲ್ಲಾ ಒಂದೊಂದಾಗಿ ಮುರಿದು ಬೀಳತೊಡಗಿದವು. ಕಾಂಪೋಸ್ಟ್ ಗುಂಡಿಗಳಿಗೆ ಬೆಂಕಿ ಇಡಲಾಗಿತ್ತು. ಏತದ ಬಾವಿ, ಪಂಪು ಹೌಸುಗಳು ಮಣ್ಣಿನಲ್ಲಿ ಹೂಳಲ್ಪಟ್ಟು, ಮೋಟಾರುಗಳು ಸುಡಲ್ಪಟ್ಟವು. ಬೆಳೆ ಬಂದ ಹೊಲ, ಗದ್ದೆಗಳು ಕಾಡಾನೆಗೆ ಸಿಕ್ಕಿದ್ದವುಗಳಂತೆ ಬಟ್ಟ ಬಯಲಾದವು. ಜನರೆಲ್ಲಾ ಕೆಂಪಯ್ಯನದೇ ಈ ಕೆಲಸ ಎಂದು ತಿಳಿದರೂ ಇದಕ್ಕೆಲ್ಲಾ ಚೆನ್ನೇಗೌಡನೇ ಕಾರಣ ಎಂಬಂತೆ ಅವನನ್ನೇ ದೂಷಿಸತೊಡಗಿದರು. ಕೆಂಪಯ್ಯನ ವಿರೋದವಾಗಿ ಇವನು ನಡೆಯದಿದ್ದರೂ ನಮಗೀ ದುಸ್ಥಿತಿ ಬರುತ್ತಿಲ್ಲವೆಂಬುದು ಅವರ ವಾದ. ಜನಸಾಮಾನ್ಯರ ಸಂಪರ್ಕವೇ ಗ್ರಾಮಸೇವಕನ ಕೆಲಸದ ಜೀವಾಳವಾದುದರಿಂದ ಚೆನ್ನೇಗೌಡ ಮಾಮೂಲಿನಂತೆ ಪ್ರತಿಯೊಬ್ಬರನ್ನೂ ಕಾಣಲು ಹೋದಾಗ ಯಾರೂ ಮುಖ ಕೊಟ್ಟು ಮಾತನಾಡುತ್ತಿರಲಿಲ್ಲ. ಅವನ ಮಾತಿಗೆ ಕಾಸಿನ ಬೆಲೆಯಿಲ್ಲವಾಯಿತು. ಅದೇನೋ ಎಂತೋ ನಿನ್ನ ನಾನು ಕೆಂಪಾಪುರಕ್ಕೆ ಹೋಗಿದ್ದಾಗ ಚೆನ್ನೇಗೌಡನನ್ನ ಕಂಡಿದ್ದೆ, ಚೆನ್ನಾಗಿಯೇ ಮಾತುಕತೆಯಾಡಿಸಿದ ಈ ಬೇಗುದಿಯೇನೋ ತೋಡಿಕೊಳ್ಳಲಿಲ್ಲ. ಈಗ ಈ ವರ್ತಮಾನ ಪ್ರಕಟವಾಗಿದೆ. ಇದರಲ್ಲಿ ಸತ್ಯವೆಷ್ಟು ಸುಳ್ಳೆಷ್ಟು ನೀನೇ ಊಹಿಸಿಕೋ. ನನಗೇನೋ ಇದು ಆತ್ಮಹತ್ಯೆಯಲ್ಲ. ಕೊಲೆ ಎಂಬ ಸಂಶಯ ಬಲವಾಗಿದೆ. ಕೆಂಪಯ್ಯನ ಕೈವಾಡ ಇದರಲ್ಲಿ ಬಲವಾಗಿದೆ. ಅವನ ಆಗ್ರಹಕ್ಕೆ ಈ ಕುಟುಂಬ ಬಲಿಯಾಗಿದೆ. ತನ್ನ ಮೇಲೆ ಯಾವ ಆಪಾದನೆಯೂ ಬರದಂತೆ ನಾಟಕ ಆಡಿ, ಸುದ್ದಿ ಉಂಟುಮಾಡಿದ್ದಾನೆ. ನೋಡಪ್ಪ ನಿನ್ನ ಕೆಲಸ ಈ ಬಗೆಯದು. ಇದರಲ್ಲಿ ಸಾಧಕ ಬಾಧಕಗಳನ್ನು ನೀನೇ ಆಲೋಚಿಸು.

ರಾಮಣ್ಣನಿಗೆ ತನ್ನ ಕೆಲಸ ಯಾವ ಬಗೆಯದೆಂಬ ಕಲ್ಪನೆ ಉಂಟಾದಾಗ ಉತ್ಸಾಹವಳಿಯಿತು. ಆದರೆ ಹೊಟ್ಟೆಯ ಪಾಡಿಗಾಗಿ ಹೊರಟಾಗಿದೆ. ಒಂದು ಪ್ರಯೋಗ ನಡೆಸಿದೆಯಾದರೂ ನೋಡುವ ಎಂಬಷ್ಟೇ ವಿಚಾರ ಮನೆಮಾಡಿತು. ಮರುದಿನ ಧೈರ್ಯಮಾಡಿ ಆನಂದೂರಿಗೆ ಹೊರಟನು.

ಆನಂದೂರು ಕಬ್ಬಿನ ಬೆಳೆಯ ತೌರೂರು. ರೈತರೆಲ್ಲಾ ಅವಿದ್ಯಾವಂತರಾದರೂ ಶ್ರೀಮಂತರಾಗಿದ್ದರು. ಇದರಿಂದ ಅವರಿಗೆಲ್ಲಾ ತಿಂಗಳಿಗೆ ನೂರು ರೂಪಾಯಿ ಸಂಬಳದ ನೌಕರನೆಂದರೆ ತಿರಸ್ಕಾರ. ರಾಮಣ್ಣ ಇದ್ದುದರಲ್ಲಿ ಎಲ್ಲರಿಗೂ ಬೇಕಾದವನಾಗಿ ಜೀವಿಸತೊಡಗಿದ್ದನು. ಪ್ರತಿ ತಿಂಗಳೂ ಅಭಿವೃದ್ಧಿಕಾರ್ಯದ ವರದಿ ಮಾಡಬೇಕಿದ್ದುದರಿಂದ ಏನಾದರೊಂದು ಹೊಸ ಸಂಘಟನೆ ಮಾಡಬೇಕಿತ್ತು. ರಾಮಣ್ಣ ತನ್ನ ಕೆಲಸದ ಚೌಕಟ್ಟನ್ನು ತಾನೇ ಹಾಕಿಕೊಳ್ಳಬೇಕಿತ್ತು. ಯಾವ ಅಧಿಕಾರಿಯೂ ಬಂದು ಗ್ರಾಮಸ್ಥರಿಗೆ ಯೋಜನೆಯನ್ನು ವಿವರಿಸಿ ಮಾಡಬೇಕಾದ ಜವಾಬ್ದಾರಿಯ ಕೆಲಸವೆಷ್ಟಿದೆಯೆಂದು ತಿಳಿಸುತ್ತಿರಲಿಲ್ಲ. ಕೇವಲ ಗ್ರಾಮಸೇವಕನನ್ನು ದಬಾಯಿಸುವುದೇ ತನ್ನ ಅಧಿಕಾರವೆಂದು ಪ್ರತಿಯೊಬ್ಬನೂ ತಿಳಿಯುತ್ತಿದ್ದನು. ಹೀಗಾಗಿ ಕೆಲಸ ಮಾಡುವುದು ಕಷ್ಟವಾಗುತ್ತಿತ್ತು.

ಒಮ್ಮೆ ಬಿ. ಡಿ. ಓ. ರವರು ಆನಂದೂರಿಗೆ ಬಂದರು. ಏನ್ರೀ ರಾಮಣ್ಣ ಈ ಊರಲ್ಲಿ ಇಷ್ಟು ಜನ ಶ್ರೀಮಂತರಿದ್ದಾರೆ. ಒಂದು ಪ್ಲೆಷರ್‌ಟ್ರಿಪ್ ಕರೆದುಕೊಂಡು ಹೋಗಿ ದಕ್ಷಿಣ ಕನ್ನಡ, ಉತ್ತರ ಕನ್ನಡ ಜಿಲ್ಲೆಗಳಲ್ಲಿ ಬಾಗಾಯ್ತು ವ್ಯವಸಾಯ ತೋರಿಸಿಕೊಂಡು ಬನ್ರಿ. ಒಂದು ದೊಡ್ಡ ವಾಚನಾಲಯ ಕಟ್ಟಿಸಿ ವಿರಾಮ ಕಾಲದಲ್ಲಿ ದೇಶದ ಸುದ್ದಿ ತಿಳಿಯುವಂತೆ ಮಾಡಿರಿ ಎಂದು ಸಲಹೆ ಕೊಟ್ಟರು. ''ಆಗಲಿ ಸರ್ ಅದಕ್ಕೇನು ಈ ತಿಂಗಳೇ ರೈತರಿಗೆ ಬಿಡುವಿದೆ. ಕರೆದೊಯ್ಯುತ್ತೇನೆ" ಎಂದು ರಾಮಣ್ಣ ತಿಳಿಸಿದನು. ಈ ಟ್ರಿಪ್ ಕರೆದೊಯ್ಯುವ ಕೆಲಸ ಬಹಳ ತಲೆ ನೋವಿನದ್ದು ಗೌಡ್ರೆ. ನೀವೆಲ್ಲಾ ಹೆಚ್ಚು ತಿರಿಗಿದವರಲ್ಲ. ಸಮಯ ಸನ್ನಿವೇಶಕ್ಕೆ ಹೊಂದಿಕೊಳ್ಳಲಾರಿರಿ. ಕಾಲಕ್ಕೆ ಸರಿಯಾಗಿ ಹೊರಡಲು ಸಿದ್ಧರಾಗಲಾರಿರಿ" ಎಂದು ಆ ದಿನ ದಿನದಿಂದ ಪೀಡಿಸತೊಡಗಿದ ಬಸವೇಗೌಡನಿಗೆ ಹೇಳಬೇಕಾಯಿತು. ಆದರೆ ಬಸವೇಗೌಡ ಬಿಡಲಿಲ್ಲ. ಏನಾದ್ರೂ ಮಾಡ್ರಿ ರಾಮಣ್ಣ ಹೋಗೋಣ. ನಾನೇ ಬೇಕಾದರೆ ಐವತ್ತು ಜನರನ್ನ ಹೊರಡಿಸ್ತೀನಿ ನಡೆಯಿರಿ

ಹೋಗುವ ಎಂದು ಪೀಡಿಸಿ ಆ ತಿಂಗಳ ಕೊನೆಯಲ್ಲಿ ಟೂರಿಸ್ಟ್ ಬಸ್ಸಿನಲ್ಲಿ ಹೊರಟೇ ಬಿಟ್ಟರು. ಅದೇ ಒಂದು ಪ್ರಪಂಚ, ಅಲ್ಲಿ ಕುಳಿತವರೆಲ್ಲಾ ಒಂದು ಕುಟುಂಬದ ಸದಸ್ಯರಂತೆ. ತಮಾಷೆಯಾಗಿ ಮಾತು ಹೊಡೆಯುತ್ತಿದ್ದಂತೆ ಮಾತು ಕೆಂಪಾಪುರದ ಕಡೆ ತಿರುಗಿತು. ಕೆಲವರು ಚಿನ್ನೆಗೌಡನ ಪಕ್ಷ ಹಿಡಿದು ವಾದಿಸತೊಡಗಿದರು. ಕೆಲವರು ಛೇರ್ಮನ್ ಕೆಂಪಯ್ಯನ ಪಕ್ಷ ಹಿಡಿದರು. ಮಾತು ಬಿಸಿ ಏರಿ, ಕಾವು ತಲೆಗೇರಿತು. ಬಸ್ಸಿನಲ್ಲಿದ್ದ ಮೂವತ್ತು ಮಂದಿ ಕೂಡಲೇ ನಾವು ಹಿಂದಿರುಗುತ್ತೇವೆಂದು ಕುಳಿತರು. ರಾಮಣ್ಣ "ಅಲ್ರೀ ಯಾವುದೋ ಮಾತಿಗೆ ತಲೆ ಕೆಡಿಸಿಕೊಂಡು ಹೊರಟ ಉದ್ದೇಶವನ್ನೇ ಮರೆಯುತಿದ್ದೀರಲ್ಲಾ, ಊರಿಗೆ ಹಿಂದಿರುಗಿದ ನಂತರ ಆ ವಿಷಯ ನೋಡೋಣ ಈಗ ನಡೆಯಿರಿ" ಎಂದ. "ಅದೆಲ್ಲಾ ಸಾಧ್ಯವಿಲ್ಲ. ಈ ಮನೆ ಹಾಳರು ಕೆಂಪಯ್ಯನ ಬಾಲವಿದ್ದಂತೆ ಇವರೆಲ್ಲಾ ಈಗಾಗಲೇ ಏನು ಪ್ಲಾನ್ ಹಾಕಿ ಬಂದಿದ್ದಾರೋ. ನಮಗೆ ಇನ್ನು ಹದಿನೈದು ದಿವಸ ಭೂಮಿ, ಮನೆ ಬಿಟ್ಟು ಹೊರಗಡೆ ತಿರುಗಲು ಸಾಧ್ಯವಿಲ್ಲ. ಈಗಲೇ ವಾಪಸ್ ಹಿಂದಿರುಗಬೇಕು" ಎಂದರವರು. ಉಳಿದವರೂ "ಹೋಗಲಿ ಬಿಡ್ರಿ. ನಮ್ಮನ್ನೆಲ್ಲಾ ಕಳ್ಳರು ಮಾಡಿದ ಮೇಲೆ ನಮಗ್ಯಾಕೆ [illegible]ರ ಸ್ನೇಹ, ಟ್ರಿಪ್ಪೂ ಬೇಡ ಏನೂ ಬೇಡ. ಬಸ್ ವಾಪ[illegible] ಮಾಡಿ" ಎಂದು ದನಿಗೂಡಿಸಿದರು. ರಾಮಣ್ಣನ ಸಾಮ, ದಾನ, ಭೇದಗಳು ನಿರುಪಯೋಗಿಯಾಯಿತು. ದಂಡ ಉಪಯೋಗಿಸುವಂತಿರಲಿಲ್ಲ. "ಹಾಳಾಗ್ಲಿ ಮುಂಡೇ ಮಕ್ಕಳು" ಎಂದು ಆದಷ್ಟು ಮೈಲೇಜ್ ಛಾರ್ಜ್ ಮಾಡಿಕೋ ಎಂದು ಬಸ್ಸಿನ ಡ್ರೈವರ್‌ಗೆ ತಿಳಿಸಿ ಬಸ್ ಹಿಂದಿರುಗಿಸಿದ. ಇದರಿಂದ ಇಡೀ ಟ್ರಿಪ್ ಕೆಟ್ಟುಹೋದುದಲ್ಲದೆ ಗ್ರಾಮದ ನೆಮ್ಮದಿ ಹಾಳಾಯಿತು. ಅಲ್ಲಿಂದ ಒಂದೇ ವಾರದಲ್ಲಿ ಗ್ರಾಮದೇವತೆ ಹಬ್ಬ ಬಂತು. ಅಗ್ನಿಕುಂಡ ತಯಾರಿಸಲು ನನ್ನ ಹೊಲದ ಮರ ಕಡಿಯಕೂಡದು ಎಂದು ಅಡ್ಡಿಪಡಿಸಿದ ಬಸವೇಗೌಡ. ಎದುರು ಪಾರ್ಟಿ ರಂಗೇಗೌಡನಿಗೆ ಇದು ಕುಚೋದ್ಯದ ಮಸಲತ್ತು ಎಂಬ ಸಂಶಯ ಬಂತು. "ಗಂಡಸಾಗಿದ್ರೇ ಗ್ರಾಮದೇವತೆ ಅಗ್ನಿಕುಂಡ ನಡೆಸಲಿ ನೋಡ್ತೀನಿ" ಎಂದು ಬಸವೇಗೌಡ ಹೇಳಿದನೆಂದು ಯಾರೋ ರಂಗೇಗೌಡನ ಕಿವಿಯಲ್ಲಿ ಊದಿದರು. "ಸರಿ ಹಾಗಾದ್ರೆ ನೋಡ್ಕೋಳು" ಎಂದವನೇ ರಂಗೇಗೌಡ ಅದೇ ಸಂಜೆ ಹತ್ತಾಳು ಕರೆದೊಯ್ದು ಬಸವೇಗೌಡನ ಹೊಲದಲ್ಲಿ ಮಾಮೂಲಾಗಿ ಕಡಿಯುತ್ತಿದ್ದ ಆಲದಮರದ ಕೊಂಬು ಕಡಿಸತೊಡಗಿದ. ಸುದ್ದಿ ತಿಳಿದ ಕೂಡಲೇ ಬಸವೇಗೌಡನ ಆಳುಗಳು ಓಡಿಬಂದರು. "ಬೇಡ ಸುಮ್ಮಗೆ ಹಿಂದಕ್ಕೋಗಿ ಗ್ರಾಮದ ಮಾಮೂಲಿಗೆ ತಂಟೆ ತರಬೇಡಿ ನಿಮ್ಮ ತಲೆ ಉಳಿಯಾಕಿಲ್ಲ ಎಂದರು" ರಂಗೇಗೌಡನ ಪಕ್ಷದವರು. ಅವರು ಕೇಳಲಿಲ್ಲ. ಮರ ಕಡಿಯಲು ಬೀಸಿದ ಕೊಡಲಿ ತಡೆಯಲು ಬಂದವನ ತಲೆ ಕಡಿಯಿತು. ರಕ್ತ ಕಂಡಕೂಡಲೇ ಹುಚ್ಚು ಆವೇಶ ಜನರಲ್ಲಿ ತುಂಬಿತು. ಗ್ರಾಮ ದೇವತೆಗೆ ಆ ವರ್ಷ ನರಬಲಿಯೇ ಸಿಗತೊಡಗಿತು. ಸುದ್ದಿ ತಿಳಿದ ರಾಮಣ್ಣ ಬೇಗ ಓಡಿಬಂದು ಯಾರಿಗೆ ಏನು ಹೇಳಿದರೂ ಕೇಳಲಾರದಾದರು. ಇತ್ತ ಬಸವೇಗೌಡನಿಗೆ ತನ್ನಾಳಿಗಾದ ಅವಮಾನ ತನ್ನದೇ ಎನ್ನಿಸಿ ರಂಗೇಗೌಡನ ಮಾಳಿಗೇ ಮನೆಗೆ ಕೊಳ್ಳಿಯಿಟ್ಟನು. ಊರಿಗೆ ಊರೇ ಹೋ ಎಂದು ಅಬ್ಬರಿಸತೊಡಗಿತು. ಆ ರಾತ್ರಿ ನಡೆದಷ್ಟು ಕೊಲೆ ಸುಲಿಗೆಗಳು ಯಾವ ಕಾಲದಲ್ಲೂ ನಡೆದಿರಲಿಲ್ಲವೆನ್ನಬಹುದು. ಎಲ್ಲರೂ ತಲ್ಲಣಗೊಂಡು ಸಿಕ್ಕಿದೆಡೆಗಳಲ್ಲಿ ಅಡಗಿ ಕುಳಿತು ಬೆಳಗು ಮಾಡಿದರು. ರಾಮಣ್ಣನಿಗೆ ಈ ಗ್ರಾಮದಲ್ಲಿ ಯಾವ ಯೋಜನೆಯೂ ನಡೆಯದೆನ್ನುವುದು ಮನದಟ್ಟಾಯಿತು. ಹಳ್ಳಿಗಳ ಸ್ಥಿತಿ ನರಕವಾಗಿದೆಯೆನಿಸಿತು. ಈ ಪುಂಡು ಗ್ರಾಮವನ್ನು ಹತೋಟಿಗೆ ತಂದರೆ ನನ್ನ ಜೀವನ ಸಾರ್ಥಕ ಎನಿಸಿತು ರಾಮಣ್ಣನಿಗೆ. ಗೆದ್ದರೆ ಈ ಗ್ರಾಮದಲ್ಲಿ ಗೆಲ್ಲಬೇಕು. ಸೋತರೂ ಇದರಲ್ಲೇ ಸೋಲಬೇಕು, ಈಗ ಚೆನ್ನಾಗಿ ಕಾಯ್ದಿದೆ ಕಬ್ಬಿಣ. ಈಗ ಸುತ್ತಿಗೆಯಿಂದ ಬಡಿದರೆ ಏನಾದರೊಂದು ಆಕಾರ ದೊರೆಯುತ್ತದೆ, ಎಂದು ತೀರ್ಮಾನಿಸಿದ. ಅಂದೇ ಸುದ್ದಿ ತಿಳಿದ ಪೋಲೀಸು ಸಬ್‌ಇನ್ಸ್‌ಪೆಕ್ಟರು ಗ್ರಾಮದ ತನಿಖೆಗೆ ಬಂದರು. ರಾಮಣ್ಣ ಗುಟ್ಟಾಗಿ ಅವರನ್ನು ಕಂಡನು. "ನೋಡಿ ಸರ್! ಈ ಹೊಡೆದಾಟ ಬರೀ ದೊಂಬಿ ಗಲಾಟೆಯಾಗಿದೆ. ನಾನು ಸ್ಥಳದಲ್ಲೇ ಇದ್ದೆ. ಒಂದು ಕ್ಷುಲ್ಲಕ ಕಾರಣಕ್ಕಾಗಿ ಈ ಹತ್ಯಾಕಾಂಡ ನಡೆದಿದೆ. ಇವರಲ್ಲಿ ರಂಗೇಗೌಡ, ಬಸವೇಗೌಡ ಪಾರ್ಟಿ ಮುಖಂಡರಾಗಿದ್ದಾರೆ ಇವರಿಬ್ಬರೂ ಅಪರಾಧಗಳಿಗೆ ನೇರ ಹೊಣೆಗಾರರಾದರೂ ಇಬ್ಬರೂ ಸಾಕಷ್ಟು ನಷ್ಟ ಈಗಾಗಲೇ ಹೊಂದಿದ್ದಾರೆ. ಆದುದರಿಂದ ಇವರಿಬ್ಬರನ್ನೂ ಕರೆಸಿ ಬಲವಾದ ವಿಚಾ

ರಣೆ ನಡೆಸಿ ಛಾರ್ಜ್‌ಶೀಟ್ ತಯಾರಿಸಿ ಅವರೆದುರೇ ಓದಿರಿ. ಅದರ ಫಲಿತಾಂಶ ಏನಾಗಬಹುದೆಂದೂ ವಿವರಿಸಿರಿ. ಇಬ್ಬರೂ ಇನ್ನೂ ತರುಣರಾದುದರಿಂದ ಹೇಗೂ ಭಯಪಡುತ್ತಾರೆ ಆಗ ನಾನೂ ಗ್ರಾಮಸೇವಕನಾಗಿ ಕೆಲವು ಮಾತು ಹೇಳಲು ಅವಕಾಶ ಕೊಡಿರಿ. ಇವರ ಮನಃಪರಿವರ್ತನೆಗೆ ಸಾಧ್ಯವಾಗುವುದೋ ನೋಡೋಣ" ಎಂದನು. ಅವರೂ ಒಪ್ಪಿದರು. ಅದರಂತೆ "ಗ್ರಾಮದ ನೆಮ್ಮದಿಯನ್ನು ಕಲಕಲು ಕಾರಣರಾದ ಪಾರ್ಟಿಗಳ ಮುಖಂಡರು ಬಸವೇಗೌಡ, ಹಾಗೂ ರಂಗೇಗೌಡರಿಗೆ ಆಜನ್ಮ ಸಜಾ ವಿಧಿಸಬೇಕೆಂದು ಕೋರ್ಟಿನ ಮುಂದೆ ಅರಿಕೆ ಮಾಡುತ್ತೇವೆ" ಎಂಬ ಒಕ್ಕಣೆ ಓದಿದಕೂಡಲೇ ಇಬ್ಬರು ಮುಖಂಡರೂ ತಲೆ ತಗ್ಗಿಸಿದರು ಆಗ ರಾಮಣ್ಣನು "ಗೌಡರೇ ನೀವು ಗಾಂಧೀಜಿಯ ಹೆಸರು ಕೇಳಿದ್ದೀರಿ ಅಲ್ಲವೆ? ಅವರ ಸಾಕ್ಷಿಯಾಗಿ ಪ್ರಮಾಣ ಮಾಡಿ ಇಬ್ಬರೂ ತಲಾ ಹತ್ತು ಸಾವಿರ ರೂಗಳ ಜಾಮೀನು ಬರೆದುಕೊಟ್ಟು ಪೋಲೀಸರಿಗೆ ಸಭ್ಯರಾಗಿ ನಡೆದುಕೊಳ್ಳುವುದರ ಬಗ್ಗೆ ಮುಚ್ಚಳಿಕೆ ಬರೆದುಕೊಡಿರಿ. ಹಾಗಾದರೆ ಈ ಬಾರಿ ನಿಮ್ಮನ್ನು ಆಪಾದನೆಯಿಂದ ಮುಕ್ತಗೊಳಿಸುವಂತೆ ಸಾಮೂಹಿಕ ಪ್ರಾರ್ಥನೆ ಸಲ್ಲಿಸಬಹುದು" ಎಂದನು.

ಅವನು ಊಹಿಸಿದಂತೆಯೇ ಇಬ್ಬರೂ ಮುಚ್ಚಳಿಕೆ ಬರೆದುಕೊಟ್ಟರು.

ಪೋಲೀಸರು ಆರು ತಿಂಗಳವರೆಗೆ ವಾರಕ್ಕೊಂದು ಬಾರಿ ಬಂದು ಪೋಲೀಸ್ ಸ್ಟೇಷನ್‌ನಲ್ಲಿ ಹಾಜರಿಕೊಟ್ಟು ಬರಲು ಅಪ್ಪಣೆಮಾಡಿ ಹೊರಟು ಹೋದರು. ಈ ಒಂದು ಉಪಕಾರ ರಾಮಣ್ಣನಿಂದಲೇ ಆದದ್ದು ಎಂಬ ಭಾವನೆ ಅವರ ಮನಸ್ಸಿನಲ್ಲಿ ಗ್ರಾಮಸೇವಕನ ಬಗೆಗೆ ಪರಮ ಗೌರವವುಂಟುಮಾಡಿತು. ಅಂದಿನಿಂದ ಆನಂದೂರು ಆನಂದದ ಊರೇ ಆಯಿತು. ಎರಡೇ ತಿಂಗಳಲ್ಲಿ ಭವ್ಯವಾದ ಒಂದು ವಾಚನಾಲಯ ತಲೆ ಎತ್ತಿತು ಅದಕ್ಕೆ ಮಹಾತ್ಮಗಾಂಧೀ ವಾಚನಾಲಯವೆಂದೇ ನಾಮಕರಣ ಮಾಡಿದರು. ಪ್ರತಿಯೊಂದು ಖುಷ್ಕಿ ಜಮೀನು ಪೊಟ್ಯಾಷ್ ಗೊಬ್ಬರ. ಕಾಂಪೋಸ್ಟ್ ಗೊಬ್ಬರವ ಸಾರ ಪಡೆಯತೊಡಗಿದವು. ರಾಮಣ್ಣನ ವಚನ ಸರ್ವ ಗ್ರಾಹ್ಯವಾಗಿತ್ತು. ನಾಟಕ ಸಂಘವೊಂದು, ಭಜನೆ ಮಂದಿರವೊಂದು, ಗ್ರಾಮದ ಯುವಕ ಸಂಘವೊಂದು ಹೀಗೆ ಹಲವಾರು ಸಾಂಸ್ಕೃತಿಕ ಚಟುವಟಿಕೆಗಳು ನಡೆಯುವ ಸಂಘ ಸಂಸ್ಥೆಗಳು ಹುಟ್ಟಿ ಬೆಳೆದವು. ಪಂಚಾಯಿತಿಯ ಸದಸ್ಯರಲ್ಲಿ ರಾಮಣ್ಣನೂ ಗಣ್ಯನಾದ ಆ ಊರಿನ ಯಾವ ತಂಟೆಯೂ ಪಂಚಾಯಿತಿ ಬಿಟ್ಟು ಕೋರ್ಟಿಗೆ ಹತ್ತಬೇಕಾದ ಪರಿಸ್ಥಿತಿಯೇ ಬಂದಾಯಿತು. ಸಹಕಾರ ಸಂಘದ ಆಡಳಿತ ಮಂಡಳಿ ಉಳಿದ ವರ್ತಕರು ಎಚ್ಚರದಿಂದ ನಡೆಸುವಂತೆ ಸಕಲ ಉಪಯುಕ್ತ ಸಾಮಾನನ್ನು ನಿಖರವಾದ ಬೆಲೆಗೆ ಮಾರತೊಡಗಿತು. ಆ ಬಾರಿ ಭತ್ತ, ಕಬ್ಬು, ರಾಗಿಯ ಬೆಳೆ ನೂರು ಪಟ್ಟಾಗಿ ಬೆಳೆದು ಬಂತು. ಜಿಲ್ಲಾಧಿಕಾರಿಗಳ ಭೇಟಿಯ ಕಾಲದಲ್ಲಿ ಸ್ವಾಗತಿಸಿದ ರಂಗೇಗೌಡ, ಬಸವೇಗೌಡರು ರಾಮಣ್ಣನನ್ನು ಎಷ್ಟು ಹೊಗಳತೊಡಗಿದರೆಂದರೆ ಇಂತಹ ಹುಡುಗರನ್ನು ನಿಯಮಿಸಿದರೆ ನೇಮಿಸಬೇಕು ಎನ್ನಿಸಿತು. ಆನಂದೂರಿನ ಗದ್ದೆಗಳ ಫಸಲು ಆ ಪ್ರಾಂತ್ಯಕ್ಕೇ ಮೊದಲನೆಯದಾಗಿ ಬಂದದ್ದರಿಂದ ಆ ವರ್ಷದ ಹೆಚ್ಚು ಆಹಾರ ಬೆಳೆದುದರ ಪ್ರೋತ್ಸಾಹಕ್ಕೆ ಬಹುಮಾನ ಆನಂದೂರಿಗೇ ಬಂದಿತು. ಗ್ರಾಮಸ್ಥರೆಲ್ಲರೂ ಈ ಗೌರವ ದೊರೆತದ್ದು ರಾಮಣ್ಣನಿಂದಲೇ ಎಂದು ಕೊಂಡಾಡಿ ತಾವೇ ಸೇರಿ ಚಿನ್ನದ ಪದಕವೊಂದನ್ನು ಮಾಡಿಸಿ ಜಿಲ್ಲಾಧಿಕಾಗಳ ಕೈಯಿಂದ ಕೊಡಿಸಿದರು. ಗ್ರಾಮ ಸೇವಕನನ್ನು ಗ್ರಾಮ ಸುಧಾರಕನೆಂದು ಕರೆಯಬೇಕೆಂದು ತೀರ್ಮಾನಿಸಿದರು. ಅಂದಿನಿಂದ ರಾಮಣ್ಣ ಸುಧಾರಕನಾದನು.



# ಕನ್ನಡ ಸಾಹಿತ್ಯದ ಇತಿಹಾಸ

ಪಂಡಿತ ಡಿ. ಗಂಗರಾಜುರವರು

ಕನ್ನಡ ಸಾಹಿತ್ಯದ ಇತಿಹಾಸವು ಕನ್ನಡನಾಡಿನ ಇತಿಹಾಸವನ್ನು ಅನುಸರಿಸಿಯೇ ಸಾಗಿದೆ. ರಾಜ್ಯದ ವೃದ್ಧಿಕ್ಷಯುಗಳೊಂದಿಗೆ, ಸಾಹಿತ್ಯದ ವೃದ್ಧಿಕ್ಷಯುಗಳು ವಾರ್ಪಟ್ಟಿವೆ. ಸ್ಥಳದಿಂದ ಸ್ಥಳಕ್ಕೆ ರಾಜ್ಯಲಕ್ಷ್ಮಿಯ ಸಂಚಾರವಾದಂತೆಲ್ಲಾ ಸಂಗಡಲೇ ಸಾಹಿತ್ಯ ಸರಸ್ವತಿಯ ಸಂಚಾರವೂ ನಡೆದಿವೆ.

ಕನ್ನಡ ಭಾಷೆಯು ಯಾವಾಗ ಹುಟ್ಟಿತೆಂಬ ಅನಾದಿ ಚರಿತ್ರೆಯನ್ನು ತಿಳಿಸುವುದು ಕಷ್ಟ. ಹಾಗೆಯೇ ಕನ್ನಡವಲ್ಲಿ ಗ್ರಂಥರಚನೆಯು ಯಾವಾಗ ಆರಂಭವಾಯಿತೆಂಬುವುದಕ್ಕೂ, ಸಾಕಾದಷ್ಟು ಆಧಾರಗಳಿಲ್ಲ. ಕ್ರಿ. ಶ. ೬ನೆಯ ಶ. ದಲ್ಲಿ ಕನ್ನಡ ಸಾಹಿತ್ಯವು ಶಾಸನ ರೂಪದಲ್ಲಿ ಪ್ರಕಟವಾಗಿರುವುದಕ್ಕೆ ಶಾಸನಗಳ ಆಧಾರವಿವೆ. ಕನ್ನಡ ಸಾಹಿತ್ಯದ ಇತಿಹಾಸವ ಈ ಆರಂಭ ಕಾಲದಲ್ಲಿ ಕಾವೇರಿ, ಗೋದಾವರಿಗಳ ಬಳಿ ತನ್ನ ಪೀಠವನ್ನು ಹಂಚಿ ನೆಲೆಸಿದ ಕನ್ನಡ ಸರಸ್ವತಿಯು ಮುಂದೆ ಗೋದಾವರಿ ಕೃಷ್ಣಾನದಿಗಳ ಮಧ್ಯದಲ್ಲಿದ್ದು ಅನಂತರ ದಕ್ಷಿಣಕ್ಕಿಳಿದು ತರುವಾಯ ತುಂಗಭದ್ರಾ ತೀರವಾಸಿನಿಯಾಗಿ ಮತ್ತೆ ಕಾವೇರಿ ತೀರವಾಸಿನಿಯಾಗಿ ಈಗ ಸುತ್ತಲೂ ವ್ಯಾಪಿಸಿಕೊಂಡಿರುವಳು.

ಕ್ರಿ. ಪೂ. 4ನೆಯ ಶ. ದಿಂದ ಕ್ರಿ. ಶ. 6ನೆಯ ಶ. ವರೆಗೆ ಉತ್ತರ ಕರ್ನಾಟಕದಲ್ಲಿ ಮೌರ್ಯರು, ಆಂಧ್ರರೂ, ಕದಂಬರೂ ದಕ್ಷಿಣದಲ್ಲಿ ಗಂಗರಸರೂ ರಾಜ್ಯಭಾರಮಾಡುತ್ತಿದ್ದರು. ಕ್ರಿ. ಪೂ. 4ನೆಯ ಶ.ದಲ್ಲಿ ಚಂದ್ರಗುಪ್ತ ಮೌರ್ಯನ ಕಾಲದಲ್ಲಿ ಉತ್ತರದಲ್ಲಿ (ವೀರಕ್ಷಾಮ) ದ್ವಾದಶ ವಾರ್ಷಿಕ ಕ್ಷಾಮವುಂಟಾಗಲು ಭದ್ರಬಾಹು ಎಂಬ ಜೈನ ಸನ್ಯಾಸಿಯು ತನ್ನ ಶಿಷ್ಯ ಮಂಡಳಿಯೊಡನೆ ದಕ್ಷಿಣ ಕರ್ನಾಟಕಕ್ಕೆ ಬಂದು ಹಾಸನದ ಡಿ॥ ಬೆಳ್ಗುಳದ ಬ[...] ಯಲ್ಲಿ ನಿಂತು ದೈವಾಧೀನನಾದನು. ಈ ಸನ್ಯಾಸಿಯನ್[...] ಹಿಂಬಾಲಿಸಿ ಚಕ್ರವರ್ತಿಯಾದ ಚಂದ್ರಗುಪ್ತನೂ ಬಂ[...] ತನ್ನ ಗುರುವಿನ ತರುವಾಯ ಬೆಳ್ಗುಳದ ಬಳಿಯ[...] ತಪಸ್ಸುಮಾಡುತ್ತಿದ್ದು ಮೋಕ್ಷಗತಿಯನ್ನು ಹೊಂದಿದನ[...] ಇಲ್ಲಿ ನೆಲೆಸಿದ್ದ ಜೈನ ಸನ್ಯಾಸಿಗಳಲ್ಲಿ ಕೆಲವರು ಕ್ರಮೇ[...] ರಾಜಗುರುಗಳಾಗಿ ಬಲವಾದ ರಾಜಾಶ್ರಯವನ್ನು ಸಂಪಾ[...] ದಿಸಿದಂತೆ ತಿಳಿಯಬರುತ್ತದೆ. ಜೈನರ ತತ್ವಾರ್ಥ[...] ಶಾಸ್ತ್ರಗ್ರಂಥಗಳು ವಿಶೇಷವಾಗಿ ಪ್ರಾಕೃತ ಭಾಷೆ[...] ಲ್ಲಿಯೂ, ಅನಂತರ ಸಂಸ್ಕೃತ ಭಾಷೆಯಲ್ಲಿಯೂ, ಬ[...] ದಂತೆ ಕಂಡು ಬಂದಿವೆ. ಹೀಗೆ ಕನ್ನಡನಾಡಿನ ದಕ್ಷಿ[...] ಭಾಗದಲ್ಲಿ ಜೈನಗುರುಗಳಿಗಿದ್ದ ರಾಜಾಶ್ರಯದಿಂ[...] ಪ್ರಾಕೃತಭಾಷೆಯೂ, ಉತ್ತರದಲ್ಲಿ ಬೌದ್ಧ ಮತವ್ಯಾ[...] ನೆಯಿಂದ ಪಾಳಿ ಭಾಷೆಯೂ, ಕೆಲವು ಕಾಲ ಪ್ರಬಲ[...] ಗಿದ್ದು, ದೇಶಭಾಷೆಯಾದ ಕನ್ನಡವನ್ನು ಮೂಲೆಗೊ[...] ದಂತೆ ಕಂಡುಬಂದಿದೆ. ಅಷ್ಟು ಹಿಂದಿನ ಕಾಲಕ್ಕೆ[...] ಊರುಗಳ ಹೆಸರುಗಳನ್ನು ಬೆಳೊಳ, ಐಹೊಳೆ, ಕಿ[...] ವೊಳಲ್, ಮುದುವೊಳಲ್ ಎಂಬ ಸುಂದರವಾದ ಕನ್ನ[...] ಸಮಾಸ ಪದಗಳಿಂದ ಕರೆಯುತ್ತಿದ್ದುದು ಪ್ರಾಚೀ[...] ಶಾಸನಗಳಿಂದ ವ್ಯಕ್ತವಾಗುತ್ತದೆ. 'ಗುಣಾಢ್ಯನು ತ[...] ಬೃಹತ್ಕಥೆಯನ್ನು ಪೈಶಾಚಿಕ ಭಾಷೆಯಲ್ಲಿ ಕ್ರಿ. [...] ಮೊದಲನೆಯ ಶತದಲ್ಲಿ ಬರೆದಿರಬಹುದೆಂದು ಚರಿತ್ರಾಧ[...] ರದಿಂದ ಗೊತ್ತಾಗುತ್ತದೆ. ಆ ಪೈಶಾಚಿಕ ಭಾಷೆಯು[...] ಕನ್ನಡವಾಗಿರಬಹುದೆಂದು ಅನುಮಾನಿಸುವುದಕ್ಕಿರು[...] ಒಂದೆರಡು ಶಾಸನಗಳನ್ನು ಬಿಟ್ಟರೆ, ಸುಮಾರು ಅದ[...] ಕಾಲದ ಕೆಲವು ತಮಿಳು ಗ್ರಂಥಗಳಲ್ಲಿಯೂ, ಬೌದ್ಧ[...] ಮಹಾವಂಶವೆಂಬ ಗ್ರಂಥಗಳಲ್ಲಿಯೂ, ಈಜಿಪ್ಟ ದೇ[...]

ದಲ್ಲಿ ದೊರೆತ ಗ್ರೀಕ್ ನಾಟಕದಲ್ಲಿಯೂ, ನಿರ್ದೇಶ ಮಾಡಿರುವ ಕನ್ನಡನಾಡು, ಕನ್ನಡನುಡಿ, ಕನ್ನಡ ಜನಗಳ ಪ್ರಸಕ್ತಿಯನ್ನು ಬಿಟ್ಟರೆ, ಕನ್ನಡದ ವಿಷಯದಲ್ಲಿ ಮತ್ತೇನು ವಿಶೇಷವಾಗಿ ತಿಳಿದು ಬರುವಂತಿಲ್ಲ. ಕ್ರಿ. ಶ. 1ನೆಯ ಶ. ದಿಂದಲೇ ಕನ್ನಡ ಗಂಗರಾಜ್ಯವು ದಕ್ಷಿಣದಲ್ಲಿತ್ತೆಂಬುದು ತಿಳಿದು ಬಂದಿರುವುದಾದರೂ ದುರ್ವಿನೀತ, ಶ್ರೀಗೊಟ್ಟ, ಶಿವಮಾರರೆಂಬ ಗಂಗರಾಜರನ್ನು ಬಿಟ್ಟರೆ, ತುಂಬಲೂರಾಚಾರ್ಯರು 7ನೆಯ ಶ. ದಲ್ಲಿ ಕನ್ನಡದಲ್ಲಿ ಬರೆದರೆಂದು ತಿಳಿದುಬಂದಿರುವ 96000 ಗ್ರಂಥ ಪರಿಮಿತಿಯುಳ್ಳ ತತ್ವಾರ್ಥ ಮಹಾಶಾಸ್ತ್ರದ ಟೀಕಾರೂಪವಾದ ಚೂಡಾಮಣಿಯೆಂಬ ಜೈನ ಗ್ರಂಥವು ಇತ್ತೆಂದು ಭಟ್ಟಾಕಳಂಕನು ಹೇಳಿರುವನು.

ಅಂತೂ ಕ್ರಿ. ಪೂ. 4ನೆಯ ಶ. ದಿಂದ ಕ್ರಿ. ಶ. 6ನೆಯ ಶ. ವರೆಗೆ ಸುಮಾರು 1000 ವರ್ಷಗಳ ಕಾಲದಲ್ಲಿ ಕನ್ನಡ ಭಾಷೆಯು ವೃದ್ಧಿಗೊಂಡಿರಲಿಲ್ಲವೆಂದು ಹೇಳಬಹುದು. 6ನೆಯ ಶ. ಆದಿಯಲ್ಲಿ ಉತ್ತರದಲ್ಲಿ ಪೂರ್ವ ಚಾಲುಕ್ಯರು ಕದಂಬರನ್ನು ಜಯಿಸಿ ರಾಜ್ಯವನ್ನಾಕ್ರಮಿಸಿದರು. ಇವರ ಕಾಲದಲ್ಲಿ ಕನ್ನಡ ಸಾಹಿತ್ಯಕ್ಕೆ ಪ್ರೋತ್ಸಾಹವು ದೊರೆಯಿತು. ಈ ಕಾಲದಲ್ಲಿ ಕನ್ನಡದ ಏಳಿಗೆಯು ಶಾಸನ ರೂಪದಲ್ಲಿ ಉಂಟಾಯಿತು. 7–8ನೆಯ ಶ. ಗಳಲ್ಲಿ ಗದ್ಯ, ಪದ್ಯ ಕರ್ತೃಗಳಾದ ಕವಿಗಳಿದ್ದರೆಂದು ನೃಪತುಂಗನ ಕವಿರಾಜ ಮಾರ್ಗದಿಂದ ತಿಳಿದು ಬರುವುದು. ಆ ಕವಿಗಳ ಗ್ರಂಥಗಳು ಯಾವುವೂ ಈಗ ದೊರೆತಿಲ್ಲ. ರಾಷ್ಟ್ರಕೂಟ ಚಕ್ರವರ್ತಿ ನೃಪತುಂಗನ (ಕ್ರಿ. ಶ. 814–877) ಕವಿರಾಜ ಮಾರ್ಗವೇ ಕನ್ನಡದಲ್ಲಿ ಮೊಟ್ಟಮೊದಲನೆಯದಾಗಿ ದೊರೆತಿರುವ ಗ್ರಂಥವು ಇದು ಅಲಂಕಾರ ಗ್ರಂಥ. ಇಂತಹ ಲಕ್ಷಣ ಗ್ರಂಥವೊಂದು 9ನೆಯ ಶ. ದ ಆದಿಯಲ್ಲಿ ರಚಿತವಾಗಿರುವುದನ್ನು ನೋಡಿದರೆ, ಅದಕ್ಕೆ ಆಧಾರವಾದ ಅನೇಕ ಲಕ್ಷ್ಯ ಗ್ರಂಥಗಳು ಹಿಂದೆಯೇ ಹುಟ್ಟಿರಬೇಕೆಂಬುದು ಸ್ಪಷ್ಟವಾಗುವುದು. ಈ ಸಿದ್ಧಾಂತವನ್ನು ದೃಢಪಡಿಸುವುದಕ್ಕೆ ಕವಿರಾಜ ಮಾರ್ಗದಲ್ಲಿ ಕನ್ನಡದಲ್ಲಿ ಗದ್ಯ ಪದ್ಯ ಗ್ರಂಥಗಳನ್ನು ರಚಿಸಿದ ಅನೇಕ ಕವಿಗಳಿದ್ದರೆಂದು ಹೇಳಿದೆ. ಅಲ್ಲದೆ ಇದುವರೆಗೂ ದೊರೆಯದೇ ಇರುವ ಒಂದು ಕನ್ನಡ ರಾಮಾಯಣದ ಹಲವು ಪದ್ಯಗಳು ಇದರಲ್ಲಿ ಲಕ್ಷ್ಯಗಳಾಗಿ ಕೊಡಲ್ಪಟ್ಟಿವೆ. ಆದುದರಿಂದ 9ನೆಯ ಶ. ಕ್ಕೆ ಹಿಂದೆಯೇ ಕನ್ನಡ ಸಾಹಿತ್ಯದಲ್ಲಿ ಅನೇಕ ಗ್ರಂಥಗಳ ನಿರ್ಮಾಣವಾಗಿತ್ತೆಂದು ಹೇಳುವುದು ಸಾಧ್ಯ. ಅಲ್ಲದೆ 10ನೆಯ ಶ. ದಲ್ಲಿ ಪಂಪ, ಪೊನ್ನ, ರನ್ನರಂತಹ ಕವಿರತ್ನತ್ರಯರು ಹುಟ್ಟಿರಬೇಕಾದರೆ, ಹಿಂದೆ ಪ್ರಸಿದ್ಧರಾದ ಬಹುಮಂದಿ ಕವಿಗಳು ಆಗಿ ಹೋಗಿರಬೇಕೆಂಬುದು ವ್ಯಕ್ತವಾಗುವುದು.

## ೮ - ೧೦ ಶ. ಮಾನ

8ನೆಯ ಶ. ದಲ್ಲಿ ಜಿನ ಧರ್ಮಾವಲಂಬಿಗಳಾದ ರಾಷ್ಟ್ರಕೂಟದಿಂದ ಚಾಲುಕ್ಯ ರಾಜ್ಯವು ಕೊನೆಗಂಡರೂ ಕನ್ನಡ ನುಡಿಯ ಏಳಿಗೆಗೆ ಕುಂದು ತಟ್ಟಲಿಲ್ಲ. ರಾಷ್ಟ್ರಕೂಟರು ಜೈನರಾದರೂ, ಎಲ್ಲ ಧರ್ಮಗಳಿಗೂ ಆಶ್ರಯವನ್ನು ಕೊಟ್ಟು, ಸರ್ವಸಮದರ್ಶಿಗಳಾಗಿದ್ದರು. 8–10 ಶ ವರೆಗೆ ಉ. ಕರ್ನಾಟಕದಲ್ಲಿ ಜೈನರಾದ ರಾಷ್ಟ್ರಕೂಟರ ರಾಜ್ಯವೂ, ದಕ್ಷಿಣದಲ್ಲಿ ಜೈನರಾದ ಗಂಗರಸ ರಾಜ್ಯವೂ ಇದ್ದುವು. ಇವರಿಬ್ಬರಲ್ಲಿ ಸಮಾನ ಧರ್ಮಾವಲಂಬನೆಯ ಜೊತೆಗೆ ಕೊಳ್ಕೊಡೆಯ ಬಾಂಧವ್ಯವೂ ಪರಸ್ಪರವಾಗಿ ನಡೆದಿತ್ತು. ಪರಿಸ್ಥಿತಿಯು ಹೀಗಿದ್ದರೂ ಶಂಕರಾಚಾರ್ಯರಿಂದೀಚೆಗೆ ವೈದಿಕ ಮತವು ತಲೆಯೆತ್ತುತ್ತ ಬಂದಂತೆಲ್ಲಾ ಜೈನಮತದ ಪ್ರಚಾರಕ್ಕೆ ಅಡ್ಡಿ ಬಂದಂತಾಯಿತು. ಆದಕಾರಣ ಜೈನರು ಜನಸಾಮಾನ್ಯಕ್ಕೆ ತಿಳಿಯದ ಪ್ರಾಕೃತ ಸಂಸ್ಕೃತಗಳನ್ನು ಬಿಟ್ಟು ದೇಶಭಾಷೆಯ ಮೂಲಕ ಮತಪ್ರಚಾರ ಮಾಡಬೇಕಾಯಿತು. ಆದಕ್ಕಾಗಿ ಸಂಸ್ಕೃತ – ಪ್ರಾಕೃತ ಭಾಷೆಗಳಲ್ಲಿ ಮುರಿತ ಕನ್ನಡ ದ್ವಿಜರನ್ನು ತಮ್ಮಲ್ಲಿಗೆ ಸೇರಿಸಿಕೊಂಡು ಅವರ ಸಹಾಯದಿಂದ ಕನ್ನಡದಲ್ಲಿ ಜಿನಧರ್ಮಪ್ರಚಾರಮಾಡುವುದು ಅವಶ್ಯಕವಾಯಿತು. 9ನೆಯ ಶ. ಆದ್ಯಂತವೂ, ಕನ್ನಡನಾಡಿನ ಸಂಸ್ಕೃತ ಪಂಡಿತರು ಕನ್ನಡದಲ್ಲಿ ಚೆನ್ನಾಗಿ ಮುರಿತರು. ಹೀಗೆ ಕನ್ನಡದ ಪ್ರಚಾರದ ಹಿತವೃಷ್ಟಿಯಿಂದಲೂ, ಉಭಯ ರಾಷ್ಟ್ರಗಳ ದೇಹಸ್ನೇಹ ಸಂಬಂಧಗಳಿಂದಲೂ, ಕಾವೇರಿಯಿಂದ ಗೋದಾವರಿಯವರೆಗೆ ಅಖಂಡ ಕನ್ನಡ ರಾಜ್ಯವು ಈ 200 ವರ್ಷಗಳ ಕಾಲ ಶಾಂತಿಗೆ ನೆಲೆವೀಡಾಗಿ ಕನ್ನಡ ಸಾಹಿತ್ಯದ ಉತ್ತರೋತ್ತರಾಭ್ಯುದಯಕ್ಕೆ ಅಭೂತಪೂರ್ವವಾದ ಪರಿಸ್ಥಿತಿಯನ್ನು ಕಲ್ಪಿಸಿತು. ಇದಕ್ಕೆ ಹಿಂದೆಯಾಗಲಿ, ಮುಂದೆಯಾಗಲಿ ಇಷ್ಟು ದೀರ್ಘಕಾಲ, ಇಷ್ಟು ಬಲವತ್ತರವಾದ ಪರಿಸ್ಥಿತಿ, ಅದರಲ್ಲಿಯೂ

ಪ್ರಶಾಂತವಾದ ಪರಿಸ್ಥಿತಿಯು ನೆಲೆಗೊಂಡಿದ್ದುದರಿಂದಲೇ ಉತ್ತರದಲ್ಲಿ ಉಭಯ ಭಾಷಾ ಪಂಡಿತರಾದ **ಪಂಪ,** ಪೊನ್ನರಂತಹ, ದಕ್ಷಿಣದಲ್ಲಿ: ಚಾವುಂಡರಾಯ, ಗುಣವರ್ಮರಂತಹ ಜೈನ ಪುರಾಣಕವಿ ಪುಂಗವರು ಬೆಳಗಿದರು. ಈ ಪರಿಸ್ಥಿತಿಯ ಬೆಂಬಲದಿಂದಲೇ ಉತ್ತರದಲ್ಲಿ ಪ್ರತಿಭಾನ್ವಿತನಾದ ಕವಿರತ್ನನೂ, ದಕ್ಷಿಣದಲ್ಲಿ ಛಂದಶ್ಶಾಸ್ತ್ರಕಾರನಾದ ನಾಗವರ್ಮನೂ, ಪ್ರಸಿದ್ಧಿಗೆ ಬಂದರು. ಚಾವುಂಡರಾಯನ ತ್ರಿಷಷ್ಟಿ ಶಲಾಕ ಮಹಾಪುರುಷ ಪುರಾಣ (ಚಾವುಂಡರಾಯ ಪುರಾಣ)ವೇ ಕನ್ನಡದಲ್ಲಿ ಸದ್ಯಕ್ಕೆ ದೊರೆತಿರುವ ಆದ್ಯ ಗದ್ಯ ಗ್ರಂಥ 10ನೆಯ ಶ. ನದ ಸಾಹಿತ್ಯದ ಮುಖ್ಯ ವೈಲಕ್ಷಣ್ಯಗಳೇನೆಂದರೆ – ಈ ಕಾಲದ ಪ್ರಧಾನ ಕವಿಗಳೊಬ್ಬೊಬ್ಬರೂ ಕನ್ನಡದಲ್ಲಿ ಒಂದೊಂದು ಜೈನ ಪುರಾಣ ಗ್ರಂಥವನ್ನೂ ಒಂದೊಂದು ಲೌಕಿಕ ಗ್ರಂಥವನ್ನೂ ಬರೆದಿರುವರು. ಆದಿಪುರಾಣ, ಶಾಂತಿಪುರಾಣ, ಅಜಿತ ಪುರಾಣಗಳನ್ನು ಯಥಾಕ್ರಮವಾಗಿ ಬರೆದ ಪಂಪ, ಪೊನ್ನ, ರನ್ನ ‹‹ರತ್ನತ್ರಯರೆಂದು ಹೆಸರುಗೊಂಡಿದ್ದಾರೆ. ಜೈನ ಧರ್ಮದ ದೃಷ್ಟಿಯಿಂದ ಸಮ್ಯಕ್ ಜ್ಞಾನ, ಸಮ್ಯಕ್ಚಾರಿತ್ರ, ಸಮ್ಯಗ್ದರ್ಶನಗಳೇ ರತ್ನತ್ರಯಗಳು. ಈ ಮೂರರ ಅಮೃತ ರಸಾಯನಗಳೇ ಮೋಕ್ಷ ಮಾರ್ಗಕ್ಕೆ ಹೇತು ಇರಲಿ. ಚಕ್ರವರ್ತಿಗಳ ಆಶ್ರಯದಲ್ಲಿ ಭುವನೈಕ ರಾಮಾಭ್ಯುದಯ ಗದಾಯುದ್ಧಗಳೆಂಬ ಲೌಕಿಕ ಕಾವ್ಯಗಳನ್ನು ಬರೆದ ಪೊನ್ನ ರನ್ನರು ಕವಿ ಚಕ್ರವರ್ತಿಗಳೆಂದು ಪ್ರಖ್ಯಾತರಾಗಿರುವರು. ಕನ್ನಡ ಸಾಹಿತ್ಯಕ್ಕೆ ಶಿಖರ ಪ್ರಾಯವಾಗಿ, ಸರ್ವೋತ್ತಮವಾದ ಕಾವ್ಯಗುಣಗಳಿಂದ ಕೂಡಿ, ಕನ್ನಡ ನುಡಿಯ ತಿರುಳೇ ಮೂರ್ತಿ ಮತ್ತಾಗಿ ಅವತರಿಸಿ ಬಂತಿರುವ ಪಂಪ ಭಾರತದ ಕೆಲವು ಭಾಗವನ್ನಾದರೂ ಓದಿ ಆನಂದಿಸಿದರೆ ಕನ್ನಡಿಗನು ತಾನು ಕನ್ನಡನಾಡಿನಲ್ಲಿ ಹುಟ್ಟಿದುದಕ್ಕೆ ಸಾರ್ಥಕವಾಗುತ್ತದೆ.

10ನೆಯ ಶತಮಾನದ ಅಂತ್ಯದಲ್ಲಿ ರಾಷ್ಟ್ರಕೂಟರು ಕಲ್ಯಾಣದ ಪಶ್ಚಿಮ ಚಾಲುಕ್ಯರಿಂದ ಪರಾಜಿತರಾದರು ಪಶ್ಚಿಮ ಚಾಲುಕ್ಯರು ವೈದಿಕ ಧರ್ಮದವರಾದುದರಿಂದ ಉತ್ತರ ಕರ್ನಾಟಕದಲ್ಲಿ ಜೈನಧರ್ಮವು ರಾಜಧರ್ಮವಾಗಲಿಲ್ಲ. ಆದರೂ ಜೈನರಿಗೆ ತಕ್ಕಮಟ್ಟಿನ ಆಶ್ರಯವು ದೊರೆಯದೆ ಹೋಗಲಿಲ್ಲ. ಪಶ್ಚಿಮ ಚಾಲುಕ್ಯ ಚಕ್ರವರ್ತಿ ನೂರ್ಮಡಿ ತೈಲಪನು ರಾಜನಾಗಿದ್ದಾಗ, ಅವನ
ಮಗ ಇರಿವ ಬೆಡಂಗ ಸತ್ಯಾಶ್ರಯನು ಯುವರಾಜನಾ
ದ್ದಾಗ, ಕವಿರನ್ನನು ಯುವರಾಜನನ್ನು ಪಾಂಡ
ಭೀಮನಿಗೆ ಹೋಲಿಸಿ, ಗದಾಯುದ್ಧ ಕಾವ್ಯವನ್ನು ಬ
ದಿರುವನು ಈ ಕಾವ್ಯವು ಪದವಾಕ್ಯ ಭಾವಾದಿಗಳ
ಪಂಪಭಾರತದ ಪ್ರತಿಬಿಂಬವಾದರೂ, ಆ ಪ್ರತಿಬಿಂಬದ
ಪ್ರಭೆಯಿದೆ, ಪ್ರತಿಭೆಯಿದೆ, ವಾಗ್ಧಾರೆಯಿದೆ, ವಾಕ
ತುರ್ಯವಿದೆ. ರಸವಿದೆ, ರಂಜನೆಯಿದೆ, ಈ ಕಾವ್ಯ ರೂಪ
ತೆರೆಯ ಹಿಂದೆ ನಾಟಕದ ನೆಲೆಗಟ್ಟಿದೆ. ರಸಿಕರು ಅದನ್ನು
ಸವಿದು ಆನಂದಿಸಬೇಕು.

## ೧೧ನೆಯ ಶತಮಾನ

ಇತ್ತ ರಾಜ್ಯ ಪ್ರಪಂಚದಲ್ಲಿ ಇಷ್ಟರೊಳಗೆ 11ನೆಯ
ಶ. ದ ಆದಿಯಲ್ಲಿ ಕರ್ನಾಟಕದಲ್ಲಿ ಬಹುಕಾಲದಿಂದ ನೆ
ಸಿದ್ದ ಗಂಗರಾಜ್ಯದಮೇಲೆ ಅದರ ಮಗ್ಗುಲಲ್ಲಿಯೇ ಇರ
ಚೋಳರು ಧಾಳಿಮಾಡಿದರು. ಗಂಗರು ಜೈನರು, ಕನ
ಡಿಗರು. ಚೋಳರಾದರೋ ಶೈವರು, ತಮಿಳರ
ಹೀಗೆ ಮತ ವೈಷಮ್ಯದಿಂದ, ಭಾಷಾ ಭಿನ್ನತೆಯಿಂದ
ನೆರೆ ಹೊರೆಯ ಕಿರುಕುಳದಿಂದ ದಕ್ಷಿಣ ಭಾಗದ ಕನ್ನ
ರಾಜ್ಯವು ಅರ್ಧ ಶ. ಕಾಲ ಅನಾಯಕವಾಯಿತು.
ಅರ್ಧ ಶ. ದೊಳಗೆ ಚೋಳರು ಪುಲಗೆರಿಯವರೆಗೂ
ನುಗ್ಗಿ, ದಾರಿಯಲ್ಲಿ ಸಿಕ್ಕಿದ ಜೈನ ಮಠಗಳನ್ನೂ, ಬಸ
ಗಳನ್ನೂ ಹಾಳುಮಾಡಿದರು. ಈ ಕಾರಣದಿಂದ 11ನೆಯ
ಶ. ದ ಪೂರ್ವಾರ್ಧದಲ್ಲಿದ್ದ ಕರ್ನಾಟಕದೊಳಗೆ ಸಾಹಿ
ಸೇವೆಗೆ ಭಂಗವುಂಟಾಯಿತು. ಈ ಕಾಲದಲ್ಲಿ ಉತ್ತರ
ಲ್ಲಿದ್ದ ಚಾಳುಕ್ಯರ ಆಶ್ರಯದಿಂದ ಕಾದಂಬರಿ, ಪಂಚ
ತಂತ್ರ, ಮದನ ತಿಲಕಗಳೆಂಬ ಕನ್ನಡ ಚಂಪೂ ಗ್ರಂ
ಗಳು ಹುಟ್ಟಿದವು. ನಾಗವರ್ಮನ ಕಾದಂಬರಿ, ಸಂಸ್ಕೃ
ಮೂಲದ ಅನುವಾದನಾದರೂ ಚಮತ್ಕೃತಿವೆತ್ತ
ಸೊಬಗು ಪಡೆದಿದೆ. ದುರ್ಗಸಿಂಹನ ಪಂಚ-ತಂತ್ರವ
ವಿಷ್ಣು ಶರ್ಮನ ಸಂಸ್ಕೃತ ಮೂಲ ಗ್ರಂಥದಿಂದ ಹುಟ್ಟಿ
ದುದಲ್ಲ. ವಸುಭಾಗಭಟ್ಟನ ಕೃತಿಯ ಕೈಗನ್ನಡಿ. ವಸು
ಭಾಗ ಭಟ್ಟನ ಮೂಲ ಸಂಸ್ಕೃತ ಗ್ರಂಥವು ಈಗ ಉಪಲ
ಬ್ಧವಿಲ್ಲ, ಎಂದರೆ ಕನ್ನಡದಲ್ಲಿರುವ ಈ ಪಂಚತಂತ್ರ ಕಥಾ
ಸರಣಿಯು ಸಂಸ್ಕೃತಕ್ಕೆ ಇಂದಿಗೂ ಹೊಸದಾಗಿದೆ
ಮದನ ತಿಲಕವು ಆಗಮಕ್ಕೂ, ಅನುಭವಕ್ಕೂ ಅ
ವಟ್ಟು, ಪರಸ್ಪರ ವಿರೋಧಗಳನ್ನು ಕಳೆದು, ಸಕಲ

ಸಾರಾಂಶಗಳನ್ನೊಂದುಮಾಡಿ, ಮಹತ್ತಾದ ವಿಷಯವನ್ನು ಸಂಗ್ರಹವಾಗಿ ಹೇಳಿರುವ ಗಂಭೀರವೂ, ಗೌರವಾರ್ಹವೂ ಆದ ಮದನ ಶಾಸ್ತ್ರಗ್ರಂಥ. ಲಲಿತವಾದ ಈ ಗ್ರಂಥದ ಮತ್ತೊಂದು ವಿಶೇಷವೇನಂದರೆ ಕನ್ನಡ ಸಂಸ್ಕೃತ ಛಂದ ಶಾಸ್ತ್ರಗಳಿಗೆ ಇದನ್ನು ಲಕ್ಷ್ಯಗ್ರಂಥವೆಂದು ಹೇಳಬಹುದು. ಇದರಲ್ಲಿರುವ ಕೆಲವು ಪದ್ಯಗಳಲ್ಲಿ ಒಂದೊಂದೇ ಪದ್ಯದೊಳಗೆ ಸಂಸ್ಕೃತದ ಹಲವು ವೃತ್ತ ಜಾತಿಗಳೂ, ಕನ್ನಡದ ಛಂದಸ್ಸೂ, ಭಿನ್ನ ಭಿನ್ನ ಬಂಧಗಳೂ ಏಕಕಾಲಕ್ಕೆ ಅಡಗಿವೆ. ಎರಡು ಮೂರು ಶಾಸ್ತ್ರಗಳ ಸಾರವನ್ನು ಒಳಗೊಂಡಿದ್ದರೂ ಇದರ ಲಾಲಿತ್ಯವು ಪರಮಾದ್ಭುತನಾಗಿದೆ. ಇಂತಹ ಅದ್ಭುತ ಅಪೂರ್ವ ಗ್ರಂಥವು ಇತರ ಸಾಹಿತ್ಯಗಳಲ್ಲಿ ದೊರೆಯುವುದು ದುಸ್ತರ. ಇದುವರೆಗೆ ಹೇಳಿದ ಈ ಮೂರು ಗ್ರಂಥಗಳೂ ಬ್ರಾಹ್ಮಣ ಕವಿ ನಿರ್ಮಿತವಾದುವು. 11ನೆಯ ಶ. ದ ಪೂರ್ವಾರ್ಧದ ಅಂತ್ಯದಲ್ಲಿ ಚೋಳರನ್ನು ಉತ್ತರದಲ್ಲಿ ಚಾಳುಕ್ಯರೂ, ದಕ್ಷಿಣದಲ್ಲಿ ಹೊಯ್ಸಳರೂ ಸದೆಬಡಿದು ಒಕ್ಕಲಿಕ್ಕಿದುದರಿಂದ ಅವರು ಕನ್ನಡ ನಾಡನ್ನು ಬಿಟ್ಟು ಹೊರಟುಹೋಗಬೇಕಾಯಿತು. ಅನಂತರ ಜೈನರು ಮತ್ತೆ ಚೇತರಿಸಿಕೊಳ್ಳುವಂತಾಯಿತು. ಈ ಶ. ದಲ್ಲಿಯೇ ಶ್ರೀಧರಾಚಾರ್ಯರ ಜಾತಕ ತಿಲಕವೂ, ನಾಗವರ್ಮಾಚಾರ್ಯರ ಚಂದ್ರ ಚೂಡಾಮಣಿ ಶತಕವೂ ರಚಿತವಾದುವು. 11ನೆಯ ಶ. ದ ವೈಲಕ್ಷಣ್ಯವೇನೆಂದರೆ, ಕಾವ್ಯಗಳು ಕಾವ್ಯೋದ್ದೇಶದಿಂದಲೇ ಜನ್ಮಿಸಿದುವು. ಮತಪ್ರಚಾರಕ್ಕಾಗಿ ಹುಟ್ಟಲಿಲ್ಲ. ಜನ ಮನೋರಂಜಕವಾದ ಕಥೆಗಳನ್ನೂ, ಲೌಕಿಕ ನೀತಿ, ರಾಜನೀತಿ ಶಾಸ್ತ್ರಗಳನ್ನೂ ಒಳಗೊಂಡ ಗ್ರಂಥಗಳು ಲಲಿತ ಶೈಲಿಯಿಂದ ನಿರ್ಮಿತವಾದುವು.

## ೧೨ನೆಯ ಶತಮಾನ

ಈ ಶ. ದ. ಸಾಹಿತ್ಯವನ್ನು ಸಾಮಾನ್ಯವಾಗಿ 4 ವಿಧಗಳಲ್ಲಿ ವಿಭಾಗಿಸಬಹುದು. ಈ ಶ. ದ. 40 ವರ್ಷಗಳಲ್ಲಿ ಜೈನರು ಮತ್ತಷ್ಟು ಚಿಗುರುವಂತಾದರೂ, ಚಾಲುಕ್ಯರೂ, ಹೊಯ್ಸಳರೂ ಸರ್ವಮತ ಸಹಿಷ್ಣುಗಳಾಗಿದ್ದರೂ.ಆವೆರಡೂ ರಾಜ್ಯಗಳಲ್ಲಿ ವೈದಿಕ ಧರ್ಮಕ್ಕೆ ಆಶ್ರಯವು ಚೆನ್ನಾಗಿದ್ದ ಕಾರಣ ಜೈನರ ಕಾವ್ಯಗಳಲ್ಲಿ ಪರಧರ್ಮ ಸಹಿಷ್ಣುತೆಯು ಹಿಂದಿನ ಕಾವ್ಯಗಳಲ್ಲಿದ್ದಂತೆ ಇಲ್ಲದೆ. ಅನ್ಯಮತ ವಿಡಂಬನೆಗೆ ಅವಕಾಶಕೊಟ್ಟಿರುವುದು. ಆದರೂ ಕಾವ್ಯಗಳ ಶೈಲಿಯಲ್ಲಿ 11ನೆಯ ಶ. ದಲ್ಲಿದ್ದ ಲಾಲಿತ್ಯವೇ ಹರಿಯುತ್ತದೆ. ಇದಕ್ಕೆ ನಾಗಚಂದ್ರನ ಪಂಪರಾಮಾಯಣ, ಬ್ರಹ್ಮಶಿವನ ಸಮಯ ಪರೀಕ್ಷೆ, ನಯ ಸೇನನ ಧರ್ಮಾಮೃತ, ಈ ಮೂರು ಗ್ರಂಥಗಳನ್ನು ಉದಾಹರಿಸಬಹುದು. ಅನಂತರ 20 ವರ್ಷಗಳನ್ನು ನಾಗವರ್ಮ, ಉದಯಾದಿತ್ಯರೆಂಬ ಲಕ್ಷಣಕಾರರ ಕಾಲವೆಂದು ಕರೆಯಬಹುದು.

### ಲಿಂಗವಂತರ ಕಾಲ

ಈ ವೇಳೆಗೆ ಉತ್ತರದಲ್ಲಿದ್ದ ಚಾಳುಕ್ಯ ರಾಜ್ಯವನ್ನು ಕಳಚುರ್ಯ ವಂಶದ ಬಿಜ್ಜಳನು ಆಕ್ರಮಿಸಿದನು. ಬಿಜ್ಜಳನು ಜೈನನು. ಇವನ ಬಳಿ ಬಸವೇಸ್ವರನೆಂಬ ಮಹಾ ಸಮರ್ಥನಾದ ಆರಾಧ್ಯ ಬ್ರಾಹ್ಮಣನು ಭಂಡಾರಿಯಾಗಿದ್ದನು ಈತನ ಕಾಲದಲ್ಲಿ ವೀರಶೈವರ ಮತಕ್ಕೆ ವಿಶೇಷ ಪ್ರೋತ್ಸಾಹ ದೊರೆಯಿತು. ಇದನ್ನು ಲಿಂಗವಂತರ ಕಾಲವೆಂದು ಕರೆಯಬಹುದು.

### ವಚನಾಮೃತ ಸಾರ

ಇದೇ ಕಾಲದಲ್ಲಿ ಬಸವೇಶ್ವರನ ಆಶ್ರಯದಲ್ಲಿ ಸ್ಥಾಪಿತವಾದ ಶಿವಾನುಭವ ಮಂಟಪದಲ್ಲಿ ಬಸವೇಶ್ವರ, ಚನ್ನಬಸವೇಶ್ವರ, ಅಲ್ಲಮ, ಸಿದ್ಧರಾಮ, ಮಹಾದೇವಿಯಕ್ಕ, ಅಂಬಿಗರ ಚೌಡಯ್ಯ, ಮಡಿವಾಳ ಮಾಚಯ್ಯ ಮುಂತಾದ ಶಿವಶರಣರು ಸಮಾಜದಲ್ಲಿಯೂ, ಮತಗಳಲ್ಲಿಯೂ, ತಲೆದೋರಿದ್ದ ಅವ್ಯವಸ್ಥೆಗಳನ್ನು ಅವುಗಳ ನಿವಾರಣೋಪಾಯಗಳನ್ನೂ,ಸಮಾಜೋದ್ಧಾರ ವಿಚಾರಗಳನ್ನೂ ಕುರಿತು ವಾಕ್ಯಾರ್ಥ ಮಾಡುತ್ತಿದ್ದರು. ಈ ವಾಕ್ಯಾರ್ಥದಲ್ಲಿ ತೇಲಿಬಂದ ನವನೀತವೇ ವಚನಾಮೃತ ಸಾರ. ಇದನ್ನೇ ಈ ಹಿಂದೆ ಕರ್ನಾಟಕ ಉಪನಿಷತ್ಸಾರವೆಂದು ಕರೆದಿವೆ. ಇದು ಅಚ್ಚ ಕನ್ನಡಿಗರಿಂದ ಕನ್ನಡದ ಹುಟ್ಟುಗುಣಗಳನ್ನು ಹೊರಸೂಸಿಕೊಂಡು ಬಂದ ವಚನರಾಶಿ. ಗದ್ಯ ಮಾಲೆಯ ಮುಸುಕಿನಲ್ಲಿ, ಕಂಡರಿಯದಂತೆ ಛಂದೋಬದ್ಧವಾಗಿ ಉಕ್ಕಿಬಂದ ವಚನ ಲಹರಿ. ಪಾಮರ ಗಣೋದ್ಧಾರಕ್ಕಾಗಿ ಶುದ್ಧಾಂತಃಕರಣದಿಂದ ಸೂಚಿಸಿಕೊಟ್ಟ ವಚನ ರಚನೆ. ಈ ವಚನ

ಗಳಲ್ಲಿ ಭಕ್ತಿ, ಜ್ಞಾನ, ವೈರಾಗ್ಯ, ಯೋಗಾಂಗಗಳ ಸದ್ಬೋಧಗಳು ಅಡಕವಾಗಿವೆ. ಕನ್ನಡಕ್ಕೆಂದೇ ವಿಲಕ್ಷಣವಾಗಿ ಏರ್ಪಟ್ಟವಚನ ಮಾರ್ಗವನ್ನು ಇತರ ಭಾಷೆಗಳಲ್ಲಿ ಕಾಣಲಾಗುವುದಿಲ್ಲ ವಚನಕಾರರ ತರುವಾಯ 5 ವರ್ಷಗಳಲ್ಲಿ ಹರಿಹರ, ರಾಘವಾಂಕರೆಂಬ ವೀರಶೈವ ಕವಿಗಳು ಪ್ರಸಿದ್ಧರಾಗಿರುವರು. ಹರಿಹರನ ಕಾವ್ಯಗಳಲ್ಲಿ ಭಕ್ತ್ಯಾವೇಶವು ಜ್ವಾಲಾಮುಖಿಯಂತೆ ಹೊರಹೊಮ್ಮುತ್ತಿರುವುದು. ಇವನು ಗಿರಿಜಾಕಲ್ಯಾಣವೆಂಬ ಚಂಪೂ ಕಾವ್ಯವನ್ನೂ, ಹಲವು ರಗಳೆಗಳನ್ನೂ ಬರೆದಿರುವನು. ಹರಿಶ್ಚಂದ್ರ ಕಾವ್ಯದಿಂದ ಹೆಸರುಗೊಂಡಿರುವ ರಾಘವಾಂಕನು ತನ್ನ ಕಾವ್ಯಗಳನ್ನು ಷಟ್ಪದಿ ರೂಪದಲ್ಲಿ ಬರೆದಿರುವನು. ಹೀಗೆ ಷಟ್ಪದಿ ರೂಪದಿಂದಲೇ ಕಾವ್ಯವನ್ನು ಬರೆದವರು ಇವನ ಹಿಂದೆ ಯಾರೂ ಇದುವರೆಗೆ ತಿಳಿದು ಬಂದಿಲ್ಲ.

### ಹೊಯ್ಸಳರ ಕಾಲ

ಈ ಕಾಲಕ್ಕೆ ಸರಿಯಾಗಿ ಉತ್ತರದಲ್ಲಿ ಕಳಚುರ್ಯರ ರಾಜ್ಯವು ದೇವಗಿರಿ ಯಾದವರಿಂದ ನಾಶವಾಗಿ, ದಕ್ಷಿಣದಲ್ಲಿದ್ದ ಹೊಯ್ಸಳ ರಾಜ್ಯವು ಉತ್ತರಕ್ಕೆ ಬಹುದೂರ ಹಬ್ಬಿತು. ಅಂತು 12ನೆಯ ಶ.ದ. ಕೊನೆಯ 30 ವರ್ಷಗಳಲ್ಲಿ ನೇಮಿಚಂದ್ರ, ರುದ್ರಭಟ್ಟ, ಅಗ್ಗಳ ಮುಂತಾದ ಜೈನ, ಬ್ರಾಹ್ಮಣ ಕವಿಗಳು ಲೀಲಾವತಿ, (ಇದು ಸುಬಂಧುವಿನ ವಾಸವದತ್ತಾ ಕಥೆಯನ್ನು ಹೋಲುವ ಶೃಂಗಾರ ಕಾವ್ಯ-) ಜಗನ್ನಾಥ ವಿಜಯ, ಚಂದ್ರಪ್ರಭ ಪುರಾಣಗಳೇ ಮುಂತಾದ ಚಂಪೂ ಕಾವ್ಯಗಳನ್ನು 10ನೆ ಶ.ದ. ಕಾವ್ಯಗಳ ಆದರ್ಶವನ್ನು ದೃಷ್ಟಿಯಲ್ಲಿಟ್ಟುಕೊಂಡು ರಚಿಸಿ ಕನ್ನಡ ಸಾಹಿತ್ಯೋತ್ಕರ್ಷಕ್ಕೆ ನೆರವಾದರು. ಆದರೆ ಈ ಕಾಲದ ಕಾವ್ಯಗಳು ಅವಶ್ಯಕತೆಗೆ ಮೀರುವಷ್ಟು ಸಂಸ್ಕೃತಪದ ಭೂಯಿಷ್ಠವಾಗಿ ಕ್ಲಿಷ್ಟ ಶೈಲಿಯಲ್ಲಿವೆ. ಇದನ್ನು ಹೊಯ್ಸಳರ ಕಾಲವೆಂದು ಕರೆಯಬಹುದು.

## ೧೩ನೆಯ ಶತಮಾನ

### ಕವಿಗೋಷ್ಠಿ

13ನೆಯ ಶತಮಾನದ ಬಹುಭಾಗದವರೆಗೂ ಕನ್ನಡ ನಾಡಿನ ಸಾಹಿತ್ಯವು ಹೊಯ್ಸಳರ ಆಶ್ರಯದಲ್ಲಿಯೇ ಬೆಳೆಯುತ್ತ ಬಂದಿತು. ಈ ಕಾಲದ ಹೆಬ್ಬಾಗಿಲ ದೀವಿಗೆಯೆಂದರೆ ಕವಿ ಚಕ್ರವರ್ತಿ ಜನ್ನನಿಗೆ ಸಲ್ಲುವುದು. ಇವನನ್ನು, ಜನಾರ್ಧನ ಕವಿಯೆಂದು ಕರೆಯುವುದುಂಟು ಇವನು ಪ್ರಸಿದ್ಧ ಕವಿಯಷ್ಟೇ ಅಲ್ಲ, ಹೊಯ್ಸಳ ನಾರಸಿಂಹ ರಾಜನಲ್ಲಿ ಮಂತ್ರಿಯೂ, ದಂಡಾದಿಪತಿಯೂ ಆಗಿದ್ದನು. ಇವನು ಅನಂತನಾಥ ಪುರಾಣವೆಂಬ ಪ್ರೌಢವಾದ ಚಂಪೂ ಕಾವ್ಯವನ್ನೂ ಬರೆದಿರುವನು. ಈ ಕಾವ್ಯದ ಶುದ್ಧ ಮುದ್ರಣವಿಲ್ಲದಿರುವುದು ಶೋಚನೀಯವಾಗಿದೆ. ಇವನು ಅಹಿಂಸಾ ಲಕ್ಷಣವನ್ನು ಕಥಾ ರೂಪದಲ್ಲಿ ಬೋಧಿಸುವ "ಯಶೋಧರ ಚರಿತ್ರೆ" ಯನ್ನು ಕನ್ನಡಿಸಿದ್ದಾನೆ. ಇದು ಬರಿಯ ಕಂದ ಪದ್ಯಗಳಲ್ಲಿಯೇ ಇದೆ. ಇದಲ್ಲದೆ ಇವನು ತರೀಕೆರೆ ಮತ್ತು ಚನ್ನರಾಯಪಟ್ಟಣಗಳ ಎರಡು ಪ್ರೌಢ ಶಾಸನಗಳನ್ನು ಕೂಡ ರಚಿಸಿರುವನು. ಇವನು, ಇವನ ಗುರುವೂ, ಇವನ ತಂದೆಯೂ, ಇವನ ಭಾವನೂ, ಇವನ ಸೋದರಳಿಯನೂ —ಎಲ್ಲರೂ ಸುಪ್ರಸಿದ್ಧ ಕವಿಗಳು. ಆದ ಕಾರಣ ಇವನ ಕಾಲದಲ್ಲಿ ದೊಡ್ಡದೊಂದು ಕವಿಗೋಷ್ಠಿಯೇ ಇದ್ದು, ಅದಕ್ಕೆ ಇವನೇ ಕಾರ್ಯದರ್ಶಿಯೋ ಏನೋ ಎಂಬಂತೆ ತೋರುವುದು. ಇದೇ ಕಾಲಕ್ಕೆ ಕನ್ನಡನಾಡಿನ ಬೇರೆ ಬೇರೆ ಕಡೆ ನೆಲಸಿದ್ದ ಜೈನ ಬ್ರಾಹ್ಮಣ ಕವಿಗಳು ಈ ಕವಿಗೋಷ್ಠಿಗೆ ಸದಸ್ಯರಾಗಿಯೋ ಪರಿಚಿತರಾಗಿಯೋ ಇದ್ದರೆಂಬ ಸಂಗತಿಯನ್ನು ಜನ್ನನ ಮಾವನಾದ ಮಲ್ಲಿಕಾರ್ಜುನನು ಸಂಕಲಿಸಿರುವ ಸೂಕ್ತಿ ಸುಧಾರ್ಣವೆಂಬ ಗ್ರಂಥದಲ್ಲಿ ಉದ್ಧರಿಸಿರುವ ಪದ್ಯಗಳಿಂದಲೂ, ಆ ಕವಿಗಳೇ ತಮ್ಮ ತಮ್ಮ ಕಾವ್ಯಗಳಲ್ಲಿ ಜನ್ನನ ಕೀರ್ತಿಯನ್ನು ಕೊಂಡಾಡಿರುವುದರಿಂದಲೂ ಊಹಿಸ ಬಹುದಾಗಿದೆ.

### ಕಬ್ಬಿಗರ ಕಾವ

ಅಂತಹ ಕವಿಗಳಲ್ಲಿ ಅಂದಯ್ಯನೆಂಬುವನೂ ಒಬ್ಬನು. ಇವನ ಗ್ರಂಥಕ್ಕೆ ಕಬ್ಬಿಗರ ಕಾವವೆಂದು ಹೆಸರು. ಕಾವ್ಯ ಎಂಬ ರೂಪದಿಂದ ಹುಟ್ಟಿದ ಕಾವ ಎಂಬ ಪದವನ್ನು ಕವಿಯು ಶ್ಲೇಷಾರ್ಥದಲ್ಲಿ ಬಳಸಿದ್ದಾನೆ. ಕಾಮರಾಜನ ವಿಜಯ ಯಾತ್ರೆಯನ್ನೊಳಗೊಂಡ ಈ ಶೃಂಗಾರ ಕಾವ್ಯದ ಶೈಲಿ ಮಾತನಾಡಿದಂತೆ ಅಂದವಾಗಿ ಬಹು ಲಲಿತವಾಗಿರುವುದಲ್ಲದೆ ಮಧುರವಾಗಿಯೂ ಇದೆ. ಇದಕ್ಕೆ ತಕ್ಕಂತೆ ಈ ಕಾವ್ಯದಲ್ಲಿ ಸಂಸ್ಕೃತ ಪದಗಳನ್ನು ಬೆರಸದೆ

ಇದನ್ನು ಬರಿಯ ದೇಶ್ಯ ಪದಗಳಿಂದಲೂ ಬರೆದಿರುತ್ತಾನೆ. ಇಂತಹ ಬೇರೊಂದು ಗ್ರಂಥವು ಇದುವರೆಗೆ ಸಿಕ್ಕಿಲ್ಲ. ಈಚೆಗೆ ಹುಟ್ಟಿಯೂ ಇಲ್ಲ. ಕನ್ನಡದ ಇಂಪನ್ನೂ, ಸೊಂಪನ್ನೂ, ಪಂಪನ್ನೂ, ಮೃದುತ್ವದಲ್ಲಿ ತ್ರಾಣವನ್ನೂ ನೋಡಲು ಬಯಸುವವರು ಈ ಸುಂದರ ಕಾವ್ಯವನ್ನು ಓದಿ ಓದಿ ಆನಂದಿಸಬೇಕು. ಕೆಲವು ಇತರ ಕವಿಗಳೆಂದರೆ ಪುಷ್ಪದಂತ ಪುರಾಣ ಕಾವ್ಯವನ್ನೂ ಬರೆದ ಇಮ್ಮಡಿ ಗುಣವರ್ಮ, ಶಾಂತೀಶ್ವರ ಪುರಾಣವನ್ನು ಬರೆದ ಕಮಲಭವ, ಸ್ವಲ್ಪ ಹೆಚ್ಚುಕಡಮೆ, ಇದೇ ಕಾಲದಲ್ಲಿ ದ್ದರೆ ಬಹುದಾದವರೊಳಗೆ ಕುಸುಮಾವಳಿಯೆಂಬ ಕಲ್ಪಿತ ಕಥೆಯನ್ನು ಬರೆದ ದೇವರವಿ, ದಂಡಿಯ ಕುಮಾರ ಚರಿತ್ರೆಯನ್ನೂ "ಅಭಿನವದ ಶಕುಮಾರ ಚರಿತ್ರೆ" ಎಂಬ ಹೆಸರಿನಿಂದ ಕನ್ನಡದಲ್ಲಿ ಚಂಪೂ ರೂಪವಾಗಿ ಬರೆದ ಚೌಂಡರಸ, ದೇವಕವಿ, ಚೌಂಡರಸ ಇವರಿಬ್ಬರೂ ಬ್ರಾಹ್ಮಣಕವಿಗಳು, ಜನ್ನನ ಸೋದರಳಿಯನಾದ ಕೇಶಿ ರಾಜನು ಶಬ್ದ ಮಣಿದರ್ಪಣವೆಂಬ ಪ್ರೌಢವಾದ ಹಳ ಗನ್ನಡ ವ್ಯಾಕರಣವನ್ನು ಬರೆದಿರುವುದು ವಿದಿತವಾಗಿಯೇ ಇದೆ. ಸುಮಾರು 1275ರಲ್ಲಿ ಕುಮುದೇಂದು ರಾಮಾ ಯಣವು ಕುಮುದೇಂದು ಕವಿಯಿಂದ ಷಟ್ಪದಿ ರೂಪದಲ್ಲಿ ರಚಿತವಾಯಿತು. ಜೈನರು ಬರೆದ ಷಟ್ಪದಿ ಕಾವ್ಯಗಳಲ್ಲಿ ಮೊಟ್ಟಮೊದಲನೆಯದಾಗಿ ನೊರೆತಿರುವುದು ಈ ಕಾವ್ಯವೇ. ಕಡೆ ಕಡೆಗೆ ಹೊಯ್ಸಳರು ಕನ್ನಡನಾಡಿನ ಉತ್ತರಕ್ಕೂ ದಕ್ಷಿಣಕ್ಕೂ ಯುದ್ಧ ಪ್ರಸಕ್ತಿಯಲ್ಲಿಯೂ ರಾಜಕೀಯ ವ್ಯವಹಾರಿಗಳಲ್ಲಿಯೂ ತೊಡಗಬೇಕಾಗಿದ್ದ ಕಾರಣ 13ನೆಯ ಶ.ದ. ಕಡೆಯ ಭಾಗದಲ್ಲಿ ಕನ್ನಡ ಸಾಹಿತ್ಯವು ಬೆಳೆಯಲು ಅನುವಾಗಲಿಲ್ಲ.

### ಪರಿಮಳ ಭರಿತವಾದ ಪುಷ್ಪವನ

ಒಟ್ಟಿನಲ್ಲಿ ಹೊಯ್ಸಳರ ಕಾಲದಲ್ಲಿ, ಅದರಲ್ಲಿಯೂ ಕ್ರಿ. ಶ. 1170 1276ರ ವರೆಗೆ ಸುಮಾರು 1 ಶ. ದ ವರೆಗೆ ಕನ್ನಡ ಸಾಹಿತ್ಯ ದೇವತೆಯ ಮಹೋತ್ಸವವು ಬಹು ವಿಜೃಂಭಣೆಯಿಂದಲೇ ನಡೆಯಿತೆಂದು ಹೇಳಬೇಕು. ಬೇಲೂರು ಹಳೇಬೀಡುಗಳೇ ರಾಜಧಾನಿಯಾಗಿ ವಿಸ್ತಾರವಾಗಿ ತನ್ನ ರಾಜ್ಯದ ಸುತ್ತಲೂ ಎಲ್ಲೆ ಲ್ಲಿಯೂ ಕನ್ನಡವನ್ನೇ ಮೇರೆಯಾಗಿ ಒಳ ಗೊಂಡು ಆ ಕಾಲದ ಕನ್ನಡ ನಾಡಿನ ತಿರುಳಂತಿದ್ದ ಹೊಯ್ಸಳ ಸಾಮ್ರಾಜ್ಯದಲ್ಲಿ ಸರ್ವಮತ ಸಹಿಷ್ಣು ಗಳಾದ ಹೊಯ್ಸಳ ರಾಜರ ಆಶ್ರಯದಲ್ಲಿ ಹಬ್ಬವು ವೈಭವದಿಂದಲೇ ನಡೆಯಿತು ಎಂಬುದರಲ್ಲಿ ಆಶ್ಚರ್ಯವೇನೂ ಇಲ್ಲ.

ಆ ಕಾಲದಲ್ಲಿ ಸಾಹಿತ್ಯದಂತೆಯೇ ಅಕ್ಷರಗಳು ಮುದ್ದಾಗಿ ಬೆಳೆದವು. ಕಲೆಗಳು ಪುಷ್ಟಿಗೊಂಡವು. ಶಿಲ್ಪವು ಚಿತ್ತಾಕರ್ಷಕವಾಯಿತು. ಹೆಚ್ಚೇನು? ಹೊಯ್ಸ ಳರ ನಾಡು ಸೌಂದರ್ಯೋಪಾದಿಯ ಪವಿತ್ರ ಭೂಮಿ ಯಾಗಿ ಇಂದಿಗೂ ಪ್ರಪಂಚಕ್ಕೆ ಬೆರಗನ್ನುಂಟುಮಾಡು ತ್ತಿರುವುದು. ಕನ್ನಡನಾಡಿನ ಸಾಹಿತ್ಯೋದ್ಯಾನದಲ್ಲಿ ಹೊಯ್ಸಳರಕಾಲವು ಪರಿಮಳಭರಿತವಾದ ಪುಷ್ಪವನವೆಂದೇ ಹೇಳಬಹುದು.

## ೧೪ನೆಯ ಶತಮಾನ

### ಅಂಧಕಾರ ಕಾಲ

14ನೆಯ ಶತಮಾನದಲ್ಲಿ ಕನ್ನಡ ಸಾಹಿತ್ಯ ಪ್ರವಾಹವು ಅಂಧಕಾರಮಯವಾದ ಕಗ್ಗಾಡಿನಲ್ಲಿ ಹರಿಯ ಬೇಕಾಯಿತು. ಈ ಶತಮಾನಾರಂಭ ಕಾಲಕ್ಕೆ ಉತ್ತರ ದಲ್ಲಿ ದೇವಗಿರಿ ಯಾದವರ ರಾಜ್ಯವು ಪಠಾಣರ ಧಾಳಿ ಯಿಂದ ಮಣ್ಣುಗೂಡಿದ ಕೆಲವು ದಿನಗಳಲ್ಲಿಯೇ ವಿಶಾಲ ವಾದ ಹೊಯ್ಸಳರಾಜ್ಯವೂ ನೆಲಸಮವಾಯಿತು. ಅಲ್ಲಾವುದ್ದೀನನ ಸೇನಾನಾಯಕನಾದ ಮಲ್ಲಿಕಾಫರ ನಿಂದ ಕ್ರಿ.ಶ. 1310ರಲ್ಲಿ ಬಹುಮಟ್ಟಿಗೆ ಸುಲಿಗೆಯಾದ ಹೊಯ್ಸಳರಾಜ್ಯಕ್ಕೆ ಅಲ್ಪಸ್ವಲ್ಪ ಗುಟುಕುಜೀವ ಉಳಿ ದರೂ ಅದು ಮತ್ತೆ 1342ರಲ್ಲಿಯೂ ಮಹಮುದ್ ಬಿನ್ ತೊಗಲಖ್‌ನ ಧಾಳಿಗೆ ಸಿಕ್ಕಿ. ನಾಮಾವಶೇಷವಾಯಿತು. ದಕ್ಷಿಣದೇಶಕ್ಕೆ ಬಂದೊದಗಿದ ಈ ವಿಪತ್ತನ್ನು ಪರಿಹರಿಸಿ ಆರ್ಯಧರ್ಮವನ್ನು ಪುನರುಜ್ಜೀವಗೊಳಿಸಬೇಕೆಂಬ ಉದ್ದೇಶದಿಂದ ಕ್ರಿ.ಶ.ಸು. 1336ರ ಕಾಲಕ್ಕೆ ತುಂಗ ಭದ್ರಾ ತೀರದ ಹಂಪೆಯ ಬಳಿ ಶೃಂಗೇರಿಮಠದ ವಿದ್ಯಾ ರಣ್ಯರಿಂದ ವಿಜಯನಗರ ರಾಜ್ಯದ ಶಂಕುಸ್ಥಾಪನೆಯಾ ಯಿತು. ಈ ರಾಜ್ಯದಲ್ಲಿ ಮೊಟ್ಟಮೊದಲು ಆಳಿದವರು ಕನ್ನಡಿಗರಾದ ಸಂಗಮವಂಶದವರು, ಕ್ರಮಕ್ರಮವಾಗಿ ಹಬ್ಬುವುದಕ್ಕೆ ತೊಡಗಿದ್ದ ಈ ರಾಜ್ಯವು 14ನೆಯ ಶತಮಾನದ ಅಂತ್ಯದವರೆಗೆ ಅಷ್ಟೇನೂ ದೊಡ್ಡದಾಗುವು ದಕ್ಕೆ ಆಸ್ಪದವಿರಲಿಲ್ಲ. ಈ ಎಲ್ಲ ಕಾರಣಗಳಿಂದ 14ನೆಯ ಶತಮಾನದ ಸಾಹಿತ್ಯದ ಮೇಲೆ ಮಂಜು ಮುಸುಕಿತು. ಆದರೂ ಈ ಶತಮಾನದಲ್ಲಿ ಪ್ರಸಿದ್ಧರಾದ ನಾಲ್ವರು

ಕವಿಗಳನ್ನು ಹೇಳಬಹುದು. ಮೊದಲನೆಯವನು ಸಾಂಗತ್ಯಕಾರನಾದ ಶಿಶುಮಾಯಣ. ಎರಡನೆಯವನು ಧರ್ಮನಾಥಪುರಾಣವೆಂಬ ಮಧುರವಾದ ಚಂಪೂ ಕಾವ್ಯವನ್ನೂ ಬರೆದ ಮಧುರಕವಿ ಮೂರನೆಯವನು, ಧರ್ಮಪರೀಕ್ಷೆಯ ವೃತ್ತವಿಲಾಸ ನಾಲ್ಕನೆಯವನು, ಷಟ್ಪದಿ ಬಸವಪುರಾಣದ ಭೀಮಕವಿ.

## ೧೫ ಮತ್ತು ೧೬ನೆಯ ಶತಮಾನಗಳು ವಿಜಯನಗರದರಸರ ಕಾಲ

ಈ ಶತಮಾನಗಳ ಸಾಹಿತ್ಯವು ವಿಶೇಷವಾಗಿ ವಿಜಯನಗರದರಸರ ಆಶ್ರಯದಲ್ಲಿಯೇ ಬೆಳೆದು ಬಹುಮಟ್ಟಿಗೆ ಷಟ್ಪದಿ, ತ್ರಿಪದಿ, ಸಾಂಗತ್ಯರೂಪದಲ್ಲಿದೆ. ಅದಕ್ಕೆ ತಕ್ಕಂತೆ ಭಾಷೆಯೂ ಸಡಿಲವಾಯಿತು. ಅಲ್ಲದೆ, ಸಂಗಮವಂಶದರಸರಿಂದ ಜೈನರಿಗೆ ಅಷ್ಟಾಗಿ ಆಶ್ರಯವು ದೊರೆತಂತೆ ಕಾಣುವುದಿಲ್ಲ. ಜೈನರಾದರೂ ಹಂಪೆಯ ಪ್ರಾಂತ್ಯದಲ್ಲಿ ವಿಶೇಷವಾಗಿ ನೆಲಸಿದ್ದಂತೆಯೂ ಕಂಡು ಬರುವುದಿಲ್ಲ. ವಿಜಯನಗರದರಸರು ಇತರ ಕನ್ನಡರಾಜರಂತೆ ಉದಾರಮತಿಗಳಾದುದರಿಂದ ಇವರು ಆಂಧ್ರರಿಗೂ, ಮರಾಠಿಗರಿಗೂ ಆಶ್ರಯವನ್ನು ಕೊಟ್ಟಿದ್ದರು. ಅಲ್ಲದೆ ಈ ಕಾಲದ ಕನ್ನಡ ರಾಜ್ಯಲಕ್ಷ್ಮಿಯ ಸಿಂಹಾಸನವು. ಕನ್ನಡನಾಡಿನ ತಿರುಳನಿಸಿಲ್ಲಿಲ್ಲ. ಹೊಸದಾದ ಈ ಪರಿಸ್ಥಿತಿಗೆ ಬಗ್ಗಿಯೇ ಕನ್ನಡ ಸರಸ್ವತಿಯ ಪೀಠವೂ ನೆಲಸಬೇಕಾಯಿತು. ಆದರೂ ಪ್ರಖ್ಯಾತರಾದ ಕೆಲವರು ಕವಿಗಳು ಈ ಕಾಲದಲ್ಲಿ ಬಾಳಿದವರು. 15ನೆಯ ಶತಮಾನದಲ್ಲಿ ಕುಮಾರವ್ಯಾಸ, ಚಾಮರಸ, ಕುಮಾರ ವಾಲ್ಮೀಕಿ ಸುರಂಗಕವಿ, ನಿಜಗುಣ ಶಿವಯೋಗಿಗಳೇ ಮೊದಲಾದ ಕವಿಗಳು ಪ್ರಸಿದ್ಧರಾಗಿದ್ದರು.

16ನೆಯ ಶತಮಾನದಲ್ಲಿ ವಿಜಯನಗರದ ವಿನಾಶ ಕಾಲದವರೆಗೆ ಎಂದರೆ ಕ್ರಿ.ಶ. 1565ರವರೆಗೆ ಮುಮ್ಮಡಿ ಮಂಗರಸ, ತಿಮ್ಮಣ್ಣಕವಿ, ಗುಬ್ಬಿಯ ಮಲ್ಲಣಾರ್ಯ, ಲಕ್ಷ್ಮೀಶ, ಭಾಗವತಕಾರರಾದ ನಿತ್ಯಾತ್ಮಶುಕಯೋಗಿ ಎಂಬ ಬಿರುದುಳ್ಳ ಚಾಟುವಿಠಲನಾಥ, ನಿರ್ವಾಣನಾಥ, ಕನಕದಾಸ, ಪುರಂದರದಾಸ, ಸರ್ವಜ್ಞರೇ ಮುಂತಾದವರು ಕನ್ನಡ ಸಾಹಿತ್ಯಕ್ಷೇತ್ರದಲ್ಲಿ ಬೆಳಗಿದರು.

ಪುರಂದರದಾಸ. ಕನಕದಾಸರ ಕೃತಿಗಳು ಶುದ್ಧ ಕರ್ನಾಟಕದ ಸಂಗೀತವೆಂಬ ರನ್ನಗನ್ನಡಿಯಲ್ಲಿ ಕಂಡರಸಿ ಮಾಡಿದ ಕೈಗನ್ನಡಿಯಾಗಿ ಆ ಕಾಲದ ಸಾಹಿತ್ಯವನ್ನೂ, ಜನಜೀವನವನ್ನೂ, ಸಾಮಾಜಿಕ, ಧಾರ್ಮಿಕ, ಆರ್ಥಿಕ ಪರಿಸ್ಥಿತಿಗಳನ್ನೂ ಮಾರ್ಮೊಳಗಿಸುತ್ತವೆ. ಪುರಾಣ ಪುಣ್ಯಕಥಾ ಮೃತಶರಧಿ ಕಡೆದು ತೆಗೆದ ನವನೀತದಲ್ಲಿ ರಚಿಸಿದ ಭಕ್ತಿಪುತ್ಥಳಿಯನ್ನು ತಾಂಡವವಾಡಿಸುತ್ತಿವೆ.

ಸರ್ವಜ್ಞ ಕೃತಿಯಲ್ಲಿಯೂ ಕೆಲವು ವಿಶೇಷ ಗುಣಗಳಿವೆ. ಬರಿಯ ತ್ರಿಪದಿಯಲ್ಲಿಯೇ ರಚಿತವಾಗಿರುವ ಈ ಕೃತಿಯಲ್ಲಿ ಕನ್ನಡ ಮಾತು. ತನ್ನ ಹುಟ್ಟುಗುಣದಿಂದ ಕೂಡಿ ಗಾದೆಯಂತೆಯೂ, ಒಗಟಿಯಂತೆಯೂ ಓದುತ್ತಿದ್ದು, ಸಮಾಜದ ದುರ್ಗುಣಗಳನ್ನು ನಿರ್ದಾಕ್ಷಿಣ್ಯವಾಗಿ ಖಂಡನೆ ಮಾಡುವ ಗಂಡುಗೊಡಲಿಯನ್ನೆತ್ತಿಕೊಂಡು ನೀತಿಸಾರವೆಂಬ ಜೇಗನ್ನು ಕಿತ್ತಿಟ್ಟು ಪಂಡಿತ ಪಾಮರೋಭಯ ರಂಜನೆಯಾಗುವಂತೆ ವಿಶ್ವಕೋಶ ಸಂಗ್ರಹವನ್ನೇ ಅಡಕ ಮಾಡಿಕೊಂಡಿವೆ. ಲಕ್ಷ್ಮೀಶನ ಜೈಮಿನಿಭಾರತವಾದರೋ, ಪದಮೈತ್ರಿ. ಅರ್ಥ ಗಾಂಭೀರ್ಯ, ಲಾಲಿತ್ಯ. ರಸಭಾವಾದಿ ಸದ್ಗುಣಗಳಿಗೆ ತೌರುಮನೆಯಾಗಿ ಕನ್ನಡ ಜಾಣರನ್ನೆಲ್ಲಾ ತಲೆದೂಗಿಸುತ್ತಾ, ಷಟ್ಪದಿ ಕಾವ್ಯಗಳ ಶಿರೋಮಣಿಯಾಗಿವೆ

16ನೆಯ ಶತಮಾನದ ಕಡೆಯ 30-35 ವರ್ಷಗಳಲ್ಲಿ ವಿಜಯನಗರ ರಾಜ್ಯವು ಹರಿದು ಹಂಚಿಹೋಗಿ ಅಲ್ಲಲ್ಲಿ ಪಾಳೆಯಗಾರರು ಬೆಳೆಯುವುದು. ತಪ್ಪಿ ಇಳಿಮುಖವಾಯಿತು. ಸಾಹಿತ್ಯಕ್ಕೆ ಆಗ ಒದಗಿದ ಈ ಕ್ಷೀಣದೆಸೆ 17ನೆಯ ಶತಮಾನದ ಪೂರ್ವಭಾಗದ ಕೊನೆಯವರೆಗೂ ಸಾಗಿತು. ಸುಮಾರು ಈ ಕಾಲದಲ್ಲಿಯೇ ಭಟ್ಟಾಕಳಂಕನ ಶಬ್ದಾನುಶಾಸನ ಎಂಬ ಕನ್ನಡ ವ್ಯಾಕರಣವು ಸಂಸ್ಕೃತದಲ್ಲಿ ರಚಿತವಾಯಿತು.

## ಮೈಸೂರರಸರ ಕಾಲ

17ನೆಯ ಶತಮಾನದ ಉತ್ತರಾರ್ಧ ಕಾಲಕ್ಕೆ ಮೈಸೂರರಸರು ತಮ್ಮ ರಾಜ್ಯವನ್ನು ಹೆಚ್ಚಿಸಿಕೊಂಡು ಕ್ರಮಕ್ರಮವಾಗಿ ಪ್ರಸಿದ್ಧಿಗೆ ಬಂದರು. ದಕ್ಷಿಣ ಹಿಂದೂಸ್ಥಾನದಲ್ಲಿ ಗೋಲ್ಕಂಡ, ಬಿಜಾಪುರವೆಂಬ ಮುಸಲ್ಮಾನರ ರಾಜ್ಯಗಳನ್ನು ಜಯಿಸಿ ತಮ್ಮ ಸಾಮ್ರಾಜ್ಯಕ್ಕೆ ಸೇರಿಸಿಕೊಳ್ಳಬೇಕೆಂದು ಬಯಸಿದ್ದ ಆಶಾಪರನಾದ ವೃದ್ಧ

ಔರಂಗಜೇಬ್, ಬಾದಷಹನಿಗೆ ಚಿಕ್ಕದೇವರಾಜ ಒಡೆಯರೂ, ಅವರ ಮಂತ್ರಿಗಳೂ, ಸಹಾಯಮಾಡಿ ಬಾದಷಹನ ಪ್ರೀತಿ ವಿಶ್ವಾಸಗಳಿಗೆ ಪಾತ್ರರಾದರು. ಹೀಗೆ ಹಿಂದೂಸ್ಥಾನದಲ್ಲಿ ಹಿಂದೂಗಳ ಕಂಟಕಪ್ರಾಯ ವಾಗಿದ್ದ ಈ ಎರಡು ಪಠಾಣರಾಜ್ಯಗಳೂ ಒಡೆದು ಹೋದ ಕೂಡಲೇ ಮೈಸೂರು ರಾಜ್ಯದ ಉತ್ಕರ್ಷವು ಚಿಕ್ಕದೇವರಾಜರ ಸಹಾಯದಿಂದ ಬೆಳೆದು ಶಿಖರಕ್ಕೆ ಮುಟ್ಟಿತು. ವಿಜಯನಗರದ ಪತನವಾದ ಮೇಲೆ ಛಿನ್ನ ಭಿನ್ನವಾದ ಕನ್ನಡನಾಡಿನಲ್ಲಿ ತಕ್ಕ ನೆಲೆಯಿಲ್ಲದೆ ಚಂಚಲ ವಾಗಿದ್ದ ಕನ್ನಡಸರಸ್ವತಿಯು ತನ್ನ ಪೀಠವನ್ನು ಮೈಸೂರು ರಾಜ್ಯವು ವಿಸ್ತಾರವಾದ ಕೂಡಲೇ ಅಲ್ಲಿ ನೆಲೆಗೊಳಿಸಿದಳು. ಆದುದರಿಂದ ಈ ಕಾಲದ ಸಾಹಿತ್ಯ ದಲ್ಲಿ ಪೂರ್ವಕಾಲದ ಸಾಹಿತ್ಯದ ಪುನರುದ್ಧಾರ ಪ್ರಯತ್ನ ವನ್ನು ನೋಡಬಹುದು. ಇಂತಹ ಪ್ರಯತ್ನಶೀಲರಲ್ಲಿ ಷಡಕ್ಷರಿಯೇ ಮೊದಲಿಗನು. ಆತನು ತನ್ನ ರಾಜಶೇಖರ ವಿಲಾಸ, ಶರಬಶಂಕರ ವಿಲಾಸ, ವೃಷಭೇಂದ್ರ ವಿಜಯ ಗಳೆಂಬ ಮಣಿತ್ರಯಗಳನ್ನು ಬರೆದು ಕೀರ್ತಿಗೊಂಡಿರು ವನು.

ಇದರ ಜೊತೆಗೆ ಚಿಕ್ಕದೇವರಾಜರ ಕಾಲದ ಸಾಹಿತ್ಯದಲ್ಲಿ ವಿಷಯವೈವಿಧ್ಯವೂ, ರಚನಾವೈವಿಧ್ಯವೂ ಐತಿಹಾಸಿಕ ವೈವಿಧ್ಯವೂ, ಒಟ್ಟಾಗಿ ಮುಪ್ಪುರಿಗೊಂಡು ಕೂಡಿವೆ ವಿಷ್ಣುಭಕ್ತಿಪರವಾದ ಹಲವು ಗ್ರಂಥಗಳು ಈ ಕಾಲದಲ್ಲಿ ಹುಟ್ಟಿದುವು. ಈ ಕಾಲದಲ್ಲಿ ಮುಖ್ಯ ಕವಿಗಳೆಂದರೆ ಮೊದಲು ತಿರುಮಲಾರ್ಯ, ಈತನು ''ಚಿಕ್ಕ ದೇವರಾಜ ವಂಶಾವಳಿ"ಯೆಂಬ ಅಭೂತಪೂರ್ವವಾದ ಗದ್ಯಕಾವ್ಯವನ್ನೂ ''ಅಪ್ರತಿಮ ವೀರಚರಿತ"ವೆಂಬ ಅಲಂಕಾರ ಗ್ರಂಥವನ್ನೂ ರಚಿಸಿರುವನು, ಇದು ಸಂಸ್ಕೃತ ರತ್ನಾಪಳಿಯ ಅನುವಾದರೂ, ಕನ್ನಡದಲ್ಲಿ ಮೊಟ್ಟ ಮೊದಲಿಗೆ ದೊರಕಿರುವ ರೂಪಕವಿದು. ಚಿಕ್ಕುಪಾಧ್ಯಾಯ ನೆಂಬ ಮತ್ತೊಬ್ಬ ಕವಿಯು ಈ ಕಾಲದಲ್ಲಿ ಲೆಕ್ಕವಿಲ್ಲ ದಷ್ಟು ಗ್ರಂಥಗಳನ್ನು ಬರೆದಿರುವನು. ದ್ರವಿಡೋಪನಿ ಷತ್ಸಾರವೂ, ದ್ರಾವಿಡ ವೇದಸಾರವೂ ಎನಿಸಿದ ''ತಿರು ವಾಯ್ಮೊಳ"ಗೆ ಕನ್ನಡ ಟೀಕೆಯನ್ನೂ, ದಿವ್ಯಸೂರಿಚರಿತೆ ಯೆಂಬ ವಿಷ್ಣುಭಕ್ತರ ಚರಿತ್ರೆಯನ್ನೂ ಬರೆದವನು ಈತನೇ. ಅಲ್ಲದೆ ಈ ಕಾಲದಲ್ಲಿ ಸಂಚಿಯ ಹೊನ್ನಮ್ಮನೇ ಮೊದಲಾದ ಹೆಂಗಸರೂ, ಕನ್ನಡ ಸಾಹಿತ್ಯ ಸೇವೆ ಯನ್ನು ಮಾಡಿರುವರು. ಚಿಕ್ಕದೇವರಾಜನೇ ಸ್ವತಃ ಕವಿಯಾಗಿದ್ದು ಗ್ರಂಥಗಳನ್ನು ಬರೆದಿರುವನು, ಈ ಕಾಲಕ್ಕೆ ಯಕ್ಷಗಾನ ಪ್ರಸಂಗಗಳೂ ತಲೆದೋರಿದುವು.

## ೧೮ನೆಯ ಶತಮಾನ

ಈ ಶತಮಾನದ ಪೂರ್ವಾರ್ಧದಲ್ಲಿ ಮೈಸೂರಿನ ಆಶ್ರಯದಲ್ಲಿಯೆ ಕನ್ನಡ ಸಾಹಿತ್ಯ ಹಿಂದಿನಂತೆಯೇ ಬೆಳೆ ಯಿತು. ಈ ಕಾಲದಲ್ಲಿಯೂ, ಸ್ತ್ರೀ ಲೇಖಕರಿದ್ದರು. ಯಕ್ಷಗಾನ ಗ್ರಂಥಗಳು ಬೆಳೆದುವು. ಮೈಸೂರು ಕೊಡಗು ರಾಜ್ಯಗಳ ಇತಿಹಾಸವನ್ನು ತಿಳಿಸುವ ಗ್ರಂಥ ಗಳು ಹೆಚ್ಚಾದವು. ಬಾಲ್ಯದ ಕೃಷ್ಣರಾಜನೂ, ಕಳಲೆಯ ನಂಜರಾಜನೂ, ಪದ್ಯಗ್ರಂಥಗಳನ್ನು ಬರೆದಿರುವರು. ಈ ಶತಮಾನದ ಉತ್ತರಾರ್ಧದಲ್ಲಿ ಮೈಸೂರು ರಾಜ್ಯವು ಹೈದರ್ ಟೀಪುಗಳ ಕೈಗೆ ಸಿಕ್ಕಿ ವಿಸ್ತಾರವಾಗುತ್ತ ಬಂದರೂ, ಸದಾ ಯುದ್ಧಪ್ರಸಕ್ತಿಯೇ ಇದ್ದ ಕಾರಣ ದಿಂದಲೂ, ರಾಜಭಾಷೆ ತಾತ್ಕಾಲಿಕವಾಗಿ ಬೇರೆಯಾದು ದರಿಂದಲೂ ಕನ್ನಡ ಸಾಹಿತ್ಯವು ಹಬ್ಬಲು ಅವಕಾಶ ವಾಗಲಿಲ್ಲ. ಉತ್ತರದಲ್ಲಿ ಹೈದರಾಬಾದು ಪ್ರಾಂತದಲ್ಲಿ ಜಗನ್ನಾಥದಾಸ ತಿಮ್ಮಣ್ಣದಾಸರೇ ಮೊದಲಾದ ವೈಷ್ಣವ ದಾಸರು ವೈಷ್ಣವ ತತ್ವಗಳನ್ನು ಹರಡಿದರು.

### ಮುಮ್ಮಡಿ ಕೃಷ್ಣರಾಜ ಒಡೆಯರ ಕಾಲ

## ೧೯ನೆಯ ಶತಮಾನ

19ನೆಯ ಶತಮಾನದ ಪೂರ್ವಾರ್ಧದಲ್ಲಿ ಮೈಸೂರಿನ ರಾಜ್ಯವು ಮತ್ತೆ ಅರಸು ಮನೆತನದವರ ಕೈಸೇರಿತು. ಈ ಕಾಲದಲ್ಲಿ ಮುಮ್ಮಡಿ ಕೃಷ್ಣರಾಜ ಒಡೆಯರವರ ಆಶ್ರಯದಲ್ಲಿ ಹಲವು ಸಂಸ್ಕೃತ ಗ್ರಂಥಗಳು ಕನ್ನಡ ಗದ್ಯ ಸರಣಿಯಲ್ಲಿ ಅನುವಾದವಾಗಿ, ಶಿಲಾಯಂತ್ರದ ಮೂಲಕ ಪ್ರಚಾರವಾದುವು. ಕೆಂಪುನಾರಾಯಣಭಟ್ಟನ ಮುದ್ರಾ ಮಂಜೂಷವೂ ಯಾದವ ಕವಿಯ ಕಲಾವತಿಪರಿಣಯವೂ ದೇವಚಂದ್ರನ ರಾಜಾವಳಿ ಕಥೆಯೂ ಇದೇ ಕಾಲದಲ್ಲಿ ರಚಿತವಾದುವು. ಇವು ಮೂರು ಗದ್ಯ ಗ್ರಂಥಗಳು. ಕಲಾವತಿ ಪರಿಣಯವು ಹಳಗನ್ನಡ ಸರಣಿಯಲ್ಲಿ ಬರೆದ ಕಲ್ಪನಾ ಕಥೆ, ಇದು ಗದ್ಯವಾದರೂ, ಇದನ್ನು ಮೊದಲಿ ನಿಂದ ಕಡೆಯವರೆಗೂ, 5-5 ಮಾತ್ರೆಯ ಗಣಗಳುಳ್ಳ, ಪ್ರಾಸವಿಲ್ಲದ ರಗಳೆಯ ರೂಪವಾಗಿ ರಚಿಸಿರುವಂತಿದೆ.

ಇದರ ಶೈಲಿ ಮನೋಹರವಾಗಿಯೂ, ಧಾಟಿ ನಿರರ್ಗಳವಾಗಿಯೂ ಓಡುತ್ತದೆ. ರಾಜಾವಳಿಕಥೆಯಲ್ಲಿ ಹಲವು ರಾಜರ, ಜೈನ ಕವಿಗಳ, ಜೈನ ಗುರುಗಳ ಚರಿತ್ರೆಯನ್ನು ವರ್ಣಿಸಿದೆ.

## ಮೈಸೂರು — ಬ್ರಿಟಿಷ್ ಕರ್ಣಾಟಕಗಳ ಕಾಲ

19ನೆಯ ಶತಮಾನದ ಉತ್ತರಾರ್ಧದಲ್ಲಿ ಅಳಿಯ ಲಿಂಗರಾಜ, ಬಸಪ್ಪಶಾಸ್ತ್ರಿ, ಎಸ್. ಜಿ. ನರಸಿಂಹಾಚಾರ್ಯ. ನಂದಳಿಕೆ ಲಕ್ಷ್ಮೀನಾರಾಯಣಪ್ಪ, ಬಿ. ವೆಂಕಟಾಚಾರ್ಯರೇ ಮುಂತಾದವರು. ಕನ್ನಡ ಸಾಹಿತ್ಯಕ್ಕೆ ತಮ್ಮ ಶಕ್ತಿಮೀರಿ ಸೇವೆಯನ್ನು ಸಲ್ಲಿಸಿರುವರು. ಬಸಪ್ಪ ಶಾಸ್ತ್ರಿಗಳು ಬರೆದ ನಾಟಕಗಳೂ, ಇತರ ಕಾವ್ಯಗಳೂ ಪ್ರಸಿದ್ಧವಾಗಿವೆ. ಎಸ್. ಜಿ. ನರಸಿಂಹಾಚಾರ್ಯರು ರಸವತ್ತಾದ ಲಲಿತಶೈಲಿಯಲ್ಲಿ ಗದ್ಯಪದ್ಯ ಕಾವ್ಯಗಳೆರಡನ್ನೂ ಬರೆದಿರುವರು. ಹಲವು ಪ್ರಾಚೀನ ಗ್ರಂಥಗಳನ್ನು ಪರಿಷ್ಕರಿಸಿ ಕಾವ್ಯಮಂಜರಿ ಮುಂತಾದುವುಗಳ ಮುಖಾಂತರ ಪ್ರಕಟವಾಗಲು ಸಹಾಯಮಾಡಿರುವರು. ನಂದಳಿಕೆ ಲಕ್ಷ್ಮೀನಾರಣಪ್ಪನು ತನ್ನ ಶ್ರೀರಾಮ ಪಟ್ಟಾಭಿಷೇಕವೆಂಬ ಷಟ್ಪದಿ ಕಾವ್ಯದ ಜತೆಗೆ ಅದ್ಭುತ ರಾಮಾಯಣ, ಶ್ರೀ ರಾಮಾಶ್ವಮೇಧಗಳೆಂಬ ಸುಪ್ರಸಿದ್ಧವಾದ ಗದ್ಯ ಗ್ರಂಥಗಳನ್ನು ಬರೆದು ಅವುಗಳ ಮೂಲಕ ಹಳಗನ್ನಡಕ್ಕೆ ನವೀನ ಶೈಲಿಗಳ ಹೊಲಿಗೆಯನ್ನು ಹಾಕಿ ಹೆಣೆದಿರುವನು. ಕಿಟ್ಟೆಲ್, ರೈಸ್ ಮುಂತಾದ ಪಾಶ್ಚಾತ್ಯ ವಿದ್ವಾಂಸರೂ ಕೂಡ ಕನ್ನಡ ಭಾಷೆಯನ್ನು ವ್ಯಾಸಂಗ ಮಾಡಿ ಹಲವು ಪುರಾತನ ಗ್ರಂಥಗಳನ್ನು ಸಂಶೋಧಿಸಿ ಅಚ್ಚುಹಾಕಿಸಿ ಬಹುವಿಧದಿಂದ ಕನ್ನಡ ಸಾಹಿತ್ಯ ಸೇವೆಯನ್ನು ಮಾಡಿರುವರು ಇದೇ ಕಾಲದಲ್ಲಿ ಹಲವು ಕನ್ನಡ ಶಾಸನಗಳು ಬೆಳಕಿಗೆ ಬಂದುವು.

## ೨೦ನೆಯ ಶತಮಾನ

ಈ ಕಾಲದಲ್ಲಿ ಸಾಹಿತ್ಯಾಭಿವೃದ್ಧಿಗೆ ಸರ್ವದೇಶಗಳ ಸಾರಗಳನ್ನೊಳಗೊಂಡ ಇಂಗ್ಲೀಷ್ ಸಾಹಿತ್ಯವು ಬಹಳ ಸಹಕಾರಿಯಾಗಿದೆ. ಹೊಸಗದ್ಯ ಶೈಲಿಯ ಸೊಬಗನ್ನು ದಕ್ಷಿಣದಲ್ಲಿ ಎಂ. ಎಸ್. ಪುಟ್ಟಣ್ಣನವರೂ, ಉತ್ತರದಲ್ಲಿ ವಾಸುದೇವಾಚಾರ್ಯರೂ ತೋರಿಸಿಕೊಟ್ಟರು.!. ಹಿಂದಿನ ಆನುಪೂರ್ವಿಯನ್ನು ಬಿಡದೆ ಈ ಕಾಲಕ್ಕೆ ತಕ್ಕ ಮಾರ್ಪಾಡು ಮಾಡಿದ ಪದ್ಯ ಶೈಲಿಯಲ್ಲಿ ಕವಿತಿಲ ಸೋಸಲೆ ಅಯ್ಯಾಶಾಸ್ತ್ರಿಗಳೂ, ರಾಜಕವಿಭೂಷಣ ಲಿ ರಾಜೇಅರಸಿನವರೂ, ಕಾವ್ಯಗಳನ್ನು ಬರೆದು ಕೀ ಶೇಷರಾಗಿರುವರು. ಈಚೆಗೆ ಕನ್ನಡದಲ್ಲಿ ಹೊಸರೀತಿ ಪದ್ಯ, ಗದ್ಯ, ನಾಟಕ, ಸಣ್ಣಕಥೆ, ನೀಳ್ಗಥೆ, ಉಪನ್ಯಾ ಹಾಸ್ಯಲೇಖನ, ವಿಮರ್ಶೆ ಮುಂತಾದುವು. ನಾ ಮುಖವಾಗಿ ಹಬ್ಬುತ್ತಿವೆ. ಮೈಸೂರು, ಬೊಂಬಾಯಿ ಮದರಾಸು, ವಿಶ್ವವಿದ್ಯಾಪೀಠದವರೂ, ಕನ್ನಡ ಭಾಷೆ ವ್ಯಾಸಂಗಕ್ಕೆ ಹೆಚ್ಚಿನ ಪ್ರೋತ್ಸಾಹವನ್ನೂ ಕೊಡುತ್ತಿ ವರು. ಕರ್ಣಾಟಕ ಸಾಹಿತ್ಯ ಪರಿಷತ್ತು, ಧಾರವಾಡ ವಿದ್ಯಾವರ್ಧಕ ಸಂಘ, ವಿದ್ಯಾಶಾಲಾ ಪಂಡಿತಮಂಡ ನಾನಾಭಾಗಗಳ ಕರ್ಣಾಟಕ ಸಂಘಗಳು ಇವು ಮೂಲಕ ಕನ್ನಡ ಭಾಷೆಯ ಪ್ರಾಚುರ್ಯಕ ಏಕರೂಪತೆಗೂ, ಕನ್ನಡ ಜನರ ಐಕ್ಯಮತ್ಯಕ್ಕೂ, ಬಹ ಮಟ್ಟಿಗೆ ಸಹಾಯಕವಾಗಿದೆ. ಆಗುತ್ತಲೂ ಇ ಮಹಾಮಹೋಪಾಧ್ಯಾಯ ರಾವ್‌ಬಹದ್ದೂರ್ ನ ಸಿಂಹಾಚಾರ್ಯರು ಅನೇಕ ವರ್ಷಗಳ ಸಂಶೋಧ ಗಳಿಂದ ಕರ್ಣಾಟಕ ಕವಿ ಚರಿತ್ರೆಯನ್ನು ಉದ್ಗ್ರ ವಾಗಿ ಬರೆದು ಕನ್ನಡಕ್ಕೆ ಮಹೋಪಕಾರ ಮಾಡಿರುವರು ಈಚೀಚೆಗೆ ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಇಂಗ್ಲೀ ಭಾಷಾ ವಿದ್ಯಾವಂತರಾದ ಕನ್ನಡಿಗರು ಶ್ರದ್ಧಾದರಗಳಿ ಸೇವೆ ಸಲ್ಲಿಸುತ್ತಿರುವರು. ಇದು ಕನ್ನಡ ಸಾಹಿತ್ಯ ಉಜ್ವಲ ಭವಿಷ್ಯದ ಮೈಲಿಗಲ್ಲಿನಂತಿದೆ. ರಾಷ್ಟ್ರ ಸ್ವಾತಂತ್ರ್ಯ ನಂತರ ಭಾಷಾವಾರು ಪ್ರಾಂತಗ ಏರ್ಪಟ್ಟುದರ ಪರಿಣಾಮವಾಗಿ ಕರ್ಣಾಟಕ ಪ್ರಾಂತದ ಕನ್ನಡಸಾಹಿತ್ಯಕ್ಕೆ ಇತೋಪ್ಯತಿಶಯವಾದ ಪ್ರೋತ್ಸಾಹ ದೊರೆಯುತ್ತಿದೆ. ಅಲ್ಲದೆ ಹಿಂದಿ ಭಾಷೆಯು ರಾ ಭಾಷಾ ಸ್ಥಾನಮಾನವನ್ನು ಪಡೆದು ರಾಷ್ಟ್ರದಾದ್ಯ ಬಳಕೆಗೆ ಬರುತ್ತಿರುವುದರಿಂದ ಅದರ ಪ್ರಭಾವವು ಕನ್ನ ಸಾಹಿತ್ಯಕ್ಕೆ ಕಳೆಗೂಡಿಸುವಂತಿದೆ.

ಹೀಗೆ ಕನ್ನಡ ಸಾಹಿತ್ಯದ ಇತಿಹಾಸವು ಬ ಮಟ್ಟಿಗೆ ರಾಜಕೀಯ ಇತಿಹಾಸವನ್ನೇ ಅನುಸರಿಸಿದಾ ಎಂದು ನಿರ್ಧರಿಸಲು ಸಾಕಾದಷ್ಟು ನಿದರ್ಶನಗಳ ಕೊಡಬಹುದಾಗಿದೆ.

# ಭಾನು—ಹನಿ

''ನಿನ್ನ ಮೂರ್ತಿಯನಾರು
ಹಿಡಿದಿರ್ಪರಲ್ಲಿ
ಆ ಬಾನಿನಲಿ
ಓ ಭಾನುದೇವ

ನಿನ್ನ ಕನಸೇ ನನಗೆ
ನಿನ್ನ ಸೇವಿಪ ಭಾಗ್ಯ–
ವೆನಗಿಲ್ಲವಲ್ಲಾ''
ನುಡಿಯದಿಂತೆಂದು ಹನಿ

''ಓ ವಿರಾಡ್ ಪ್ರಭುವೇ
ನಿನ್ನ ಪಡೆಯುತಿ ಸುಖಿಸೆ
ಬಲು ಸಣ್ಣ ಹನಿ ನಾನು
ಕಣ್ಣೀರು ತುಂಬಿದಾ
ಬದುಕಾದುದೆನಗೆ''

''ಮೇರೆಗಾಣದ ಬಾನ
ಬೆಳಗುವೆನು ನಿಜನಿಜ
ಆದರೇಂ ಪುಟ್ಟಹನಿ–
ಗರ್ಪಿತಂ ನಾನಾಗಿಹೆ''
ನುಡಿದ ನಿಂತಾ ಭಾನು

''ಬೆಳಕಿನಾ ಕಿಡಿಯಾಗಿ
ನೈದುಂಬಿ ಬರುವೆನೈ
ಸಂತಸದ ನಗೆತುಂಬಿ
ನೀ ಬಾಳುವಂತೆ''.

—ಟಿ. ವಿ. ಮುತ್ತಾಚಾರ್ಯ

(ಅನುವಾದ : ರವೀಂದ್ರನಾಥ ಠಾಕೂರರ ''Fruit Gathreing''ಗ್ರಂಥದ 62ನೆಯ ಗೀತ)

# ಅಮರ ಹಿಮಗಿರಿ

ಲೇಖಕರು :

ಪಂಡಿತ ಕೆ. ಪಿ. ಶಿವಲಿಂಗಯ್ಯ

'ಪದದರ್ಥ ಪಲ್ಲವಿಯಲ್ಲಿ' ಎನ್ನುವ ನಾಣ್ಣುಡಿಯಂತೆ ಈ ಪ್ರಬಂಧದ ಶಿರೋನಾಮೆಯಲ್ಲಿ ಇರುವ 'ಅಮರ' ಎಂಬ ವಿಶೇಷಣ (ಪದ)ವು "ಹಿಮಗಿರಿ"ಯ ಮಹತ್ವವನ್ನು ಉಚಿತ ರೀತಿ ಪ್ರತಿಬಿಂಬಿಸುತ್ತವೆ. ಅಂದರೆ ನಶ್ವರವಲ್ಲದ, ಆಚಂದ್ರಾರ್ಕವಾದ ಹಿಮವತ್ಪರ್ವತ—ಎಂಬ ಅರ್ಥವನ್ನು ಕೊಡುತ್ತದೆ.

ಅಮರ-ಅರ್ಥಾತ್ ಶಾಶ್ವತವೆಂದೊಡನೆ, ಕೇವಲ ಭೌತಿಕವಾಗಿ ಮಾತ್ರವೇ-ಎಂಬ ಪ್ರಶ್ನೆಯುದ್ಭವಿಸಬಹುದು. ಅದಕ್ಕೆ ಉತ್ತರವಾಗಿ 'ಅಲ್ಲ' ಎಂದು ಹೇಳಲು ಹಿಂಜರಿಯಬೇಕಾಗಿಲ್ಲ. ಅತ್ಯಂತ ಪ್ರಾಚೀನವಾದ ಹಿನ್ನಲೆಯನ್ನೊಳಗೊಂಡಿರುವ ಈ ಹಿಮವತ್ಪರ್ವತವು ಪೌರಾಣಿಕ, ಐತಿಹಾಸಿಕ ಹಾಗೂ ಭೌಗೋಳಿಕ-ಎಲ್ಲ ರೀತಿಗಳಲ್ಲೂ ಯಶಸ್ವಿಯಾದ ಅಮರತ್ವವನ್ನು ಪಡೆದಿರುವುದು ನಿಜಕ್ಕೂ ನಾಡಿಗೆ ಹೆಮ್ಮೆ ತರುವಂತಹ ವಿಷಯವೇ ಸರಿ.

ಪೌರಾಣಿಕವಾಗಿ ಇದರ ಖ್ಯಾತಿಯನ್ನು ಪ್ರಸ್ತಾಪಿಸುವುದೆಂದರೆ, ಅದೊಂದು ಸಾಹಸದ ಮಾತೇ ಆದೀತು ಅಷ್ಟೊಂದು ವಿಶಾಲವಾದ ರೂಪ-ರೇಷೆಗಳುಂಟು ಅದಕ್ಕೆ. ವೇದ ಕಾಲದಿಂದ ಹಿಡಿದು, ರಾಮಾಯಣ-ಮಹಾಭಾರತ ಮಹಾಕಾವ್ಯಗಳವರೆಗೂ ದೊರೆಯುವ ಎಲ್ಲ ಸಾಹಿತ್ಯದ ಕಥಾಭಾಗಗಳಲ್ಲಿಯೂ ಹಿಮಗಿರಿಯ ವಿವಿಧ ಭಾಗಗಳಲ್ಲಿ ತಪಸ್ಸುಮಾಡಿ ಸಿದ್ಧಿ ಪಡೆದ ತಪೋಮಹಿಮರನೇಕರ ಮಹಿಮೆ ನಮಗೆ ಅಭಿವ್ಯಕ್ತವಾಗುತ್ತದೆ.

ಭಾರತದೇಶದ ಸುವರ್ಣಯುಗ (Golden Age) ವೆಂದು ಇತಿಹಾಸ ಪ್ರಸಿದ್ಧವಾಗಿರುವ ಗುಪ್ತ ಸಾಮ್ರಾಜ್ಯದ ಪ್ರಸಿದ್ಧ ಸಾಮ್ರಾಟರ ಕಾಲದಲ್ಲೇ 'ಕಾಳಿದಾಸ' ಮಹಾಕವಿಯಿದ್ದುದು-ಎಂದು ಸಂಶೋಧನೆಗಳಿಂದ ತಿಳಿದು ಬಂದಿರುವ ವಿಷಯವಾಗಿದೆಯಷ್ಟೆ. ಕವಿಕುಲ ಗುರುವಾದ ಆ ಮಹಾನುಭಾವನು ರಚಿಸಿರುವ 'ಕುಮಾರ ಸಂಭವ' ಮಹಾಕಾವ್ಯದಲ್ಲಿನ ಪ್ರಥಮ ಪದ್ಯ (ಶ್ಲೋಕ)ವೇ 'ಹಿಮಗಿರಿ'ಯನ್ನು ಕುರಿತದ್ದು. ಆತನು ಸ್ತುತಿಸಿರುವಂತೆ—"ಅಸ್ತ್ಯುತ್ತರಸ್ಯಾಂ ದಿಶಿದೇವತಾತ್ಮಾ ಹಿಮಾಲಯೋ ನಾಮ ನಗಾಧಿರಾಜಃ। ಪೂರ್ವಾಪರೌ ತೋಯನಿಧೀವಗಾಹ್ಯಸ್ಥಿತಃ ಪೃಥಿವ್ಯಾ ಇವ ಮಾನದಣ್ಡಃ॥"—ಹಿಮಾಲಯವು (ಹಿಮವಂತನು) ಪರ್ವತರಾಜ. ಜಗತ್ತಿನ ಪರ್ವತಗಳಲ್ಲೇ ಅತ್ಯಂತ ಎತ್ತರವಾಗಿರುವ ಈ ಪರ್ವತ—ನಿಗೆ, ರಾಜತ್ವವೂ ಪ್ರಾಪ್ತವಾಗಿರುವುದು ಎಷ್ಟು ಜೀವಂತ ವರ್ಣನೆ! 'ಮಾನದಣ್ಡ' ಎನ್ನುವ ಮಾತಿನಲ್ಲಿ ಕೂಡ ಕೇವಲ ಅಳತೆಗೋಲು ಎನ್ನುವುದಕ್ಕಿಂತ—ಈ ಪರ್ವತವಿಲ್ಲದೇ ಹೋಗಿದ್ದ ಪಕ್ಷದಲ್ಲಿ ನಮ್ಮ ದೇಶದ ಮಾನ-ಮರ್ಯಾದೆಗಳೆಲ್ಲ "ದಂಡ"ವಾಗಿ ಹೋಗುತ್ತಿದ್ದುವು ಇದುವರೆಗಾಗಲೇ-ಎಂದು ಕೆಲವು ವಿದ್ವಾಂಸರು ಅಭಿಪ್ರಾಯಪಡುವುದು ತಪ್ಪಾಗಿ ತೋರದು.

ಭೌಗೋಲಿಕವಾಗಿಯಂತೂ - ಪ್ರಾಥಮಿಕ ಶಾಲೆಯ ಮಕ್ಕಳಿಂದ ದೊಡ್ಡ (ಪ್ರೌಢ) ತರಗತಿಗಳವರೆಗೂ ಬೋಧಿಸುತ್ತಿರುವ ಹಾಗೆ-"ಹಿಮಗಿರಿ" ಯ ಮಹತ್ವ, ಅದರಿಂದ ನಮ್ಮ ಇಂಡಿಯಾ ದೇಶಕ್ಕೆ ಆಗಿ

ರುವ ಮಹದುಪಕಾರ ಅವರ್ಣನೀಯ. ಉತ್ತರದಿಂದ ಬರಬಹುದಾದ ಶತ್ರುಗಳನ್ನು ತಡೆಯುವ ಕಾವಲುಗಾರ ಮಾತ್ರನಾಗಿ ಉಳಿದಿಲ್ಲ ಹಿಮವಂತ; ಪರಂತು, ಶೀತ ವಲಯದಿಂದ (ಉತ್ತರ ಧೃವ ಪ್ರದೇಶ) ಬೀಸುವ ಶೈತ್ಯ ಮಾರುತಗಳನ್ನು ತಡೆದು, ದೇಶಕ್ಕೆ ವಾಯುಗುಣವನ್ನು ಹಿತಕರವಾಗಿಟ್ಟಿರುವುದಲ್ಲದೆ, ಮಂಜಿನಿಂದಾವೃತವಾಗಿ ಶೀತವಲಯದ ಸಸ್ಯವರ್ಗದ ಕಾಡಾಗಬೇಕಾಗಿದ್ದ ಉತ್ತರ ಭಾರತಭೂಮಿಯನ್ನು ಸಂಪದ್ಭರಿತವಾದ ನಾಡಾಗಿಸಿರುವುದು ಅದರ ಅಮರತ್ವದ ಕುರುಹಲ್ಲವೆ ಮತ್ತೇನು? ಅದರಿಂದುದ್ಭವಿಸಿ ನಾಡಿನ ಜೀವನಾಡಿ ಗಳಾಗಿರುವ ನದಿನದಗಳ 'ಮಾತೃಕೆ' ಯಾಗಿರುವು ದಂತೂ ಭಾರತೀಯರಿಗೆ (ಏಕೆ–ಭಾವಿಸಿದರೆ ನಮಗೆ ಸೋದರರೇ ಆಗಬೇಕಾದ–ಪಾಕೀಸ್ತಾನಿಗಳಿಗೆ ಕೂಡ) 'ಅನ್ನಪೂರ್ಣೆ'ಯ ಸ್ಥಾನವನ್ನು ಪ್ರಚ್ಛನ್ನವಾಗಿ ಆಕ್ರಮಿ ಸಿದೆ–ಹಿಮಗಿರಿಯೆನ್ನಬಹುದು.

ಆಕ್ಷೇಪ—ಹೀಗಿದ್ದೂ ಹಿಂದೆ 'ಖೈಬರ್' ಮುಂತಾದ ಕಣಿವೆಗಳಿಂದ, ಇಂದು "ಟಿಬೆಟ್" ''ನೇಫಾ" ಕಡೆಯ ಇಳುಕಲುಗಳಿಂದ, ಶತ್ರುಗಳು ನುಗ್ಗಿ ಬಂದ ಪ್ರಸಂಗ ಇದೆಯೆಂದು ಭಾವಿಸಿದರೂ ''ಹಿಮ" ದಿಂದಾವೃತವಾದ ಉತ್ತುಂಗಸಾನುಗಳಿಂದ ಕೂಡಿದ ''ಗಿರಿ" ಗಳ ಶ್ರೇಣಿಯಿಲ್ಲದೇ ಇದ್ದರೆ ಗತಿ ಯೇನಾಗುತ್ತಿತ್ತೆಂದು ವಿವೇಚಿಸಿದರೆ ಸಾಕು!

ಇಷ್ಟೇ ಅಲ್ಲ, ಹಿಮಗಿರಿಯಿಂದ ಅದರಷ್ಟೇ ಜಗ ತ್ಪ್ರಸಿದ್ಧಿಯನ್ನು ಪಡೆದ ವ್ಯಕ್ತಿಗಳೂ ಉಂಟಲ್ಲ. ''ತೇನ್‌ಸಿಂಗ್" ಇಂದು ವಿಶ್ವಪೂಜ್ಯತೆ ಗಳಿಸಿರುವುದು ''ಎವರೆಸ್ಟ್ ವೀರ"ನೆಂದಾದ್ದರಿಂದಲ್ಲವೆ. ಅವನಂತೆಯೇ ಹಿಮಗಿರಿಯನ್ನಾರೋಹಿಸಿದ ವೀರರಿಗೆಲ್ಲ ತಕ್ಕ ರೀತಿಯ ಪ್ರತಿಷ್ಠೆ–ಮರ್ಯಾದೆಗಳು ಲಭಿಸಿಯೇ ಇವೆ. ಇತ್ತೀ ಚಿಗೆ ಚೀನಿಯರ ಧಾಳಿಯಿಂದ ಕೂಡ ''ಹಿಮಗಿರಿ"ಗೆ ಅಂತರರಾಷ್ಟ್ರೀಯ ಮಾನ್ಯತೆ ದೊರೆತಿದೆ.

ಕನ್ನಡ ಸುಪ್ರಸಿದ್ಧ ಸಾಹಿತಿ ವ್ಯೆ. ವೆಂ. ಸೀ. ರಾಘವ ಅವರ ''ಹೇಮಂತನ ದೊರೆತನ" ಎಂಬ ಕವಿತೆ ಯಲ್ಲಿನ ''ಹಿಮ ಮಕುಟವಿಟ್ಟು ಹಿಮವಂತನಿಗೆ....." ಎನ್ನುವ ನುಡಿ, ''ಶುಭ್ರ ತುಷಾರ ಕಿರೀಟ"ವೆನ್ನುವ ಮಾತು, ''ಕನ್ಯಾಕುಮಾರಿಯಿಂದ ಹಿಮಾಲಯದ ವರೆಗೆ" ಎಂಬ ಸರ್ವೇ ಸಾಮಾನ್ಯ–ಸಂದರ್ಭೋಚಿತ ಕಥನ—ಇವೆಲ್ಲ ''ಹಿಮಗಿರಿಯ ಅಮರತ್ವ"ಕ್ಕೆ ಸಾಕ್ಷೀ ಭೂತವಾಗಿ ನಿಂತಿರುವ ಶಾಶ್ವತ ನುಡಿಗಳು.

ಹೀಗೆ ಭೌಗೋಲಿಕವಾಗಿ, ಪೌರಾಣಿಕವಾಗಿ, ಐತಿಹಾಸಿಕವಾಗಿ ಕಡೆಗೆ–ಇತ್ತೀಚಿನ ವರ್ತುಲಗಳ ಕೈವಾ ಡಕ್ಕೆ ಸಿಕ್ಕಿರುವಂತೆ–ರಾಜಕೀಯವಾಗಿ ಮಹತ್ವಸ್ಥಾನ ವನ್ನು ಹೊಂದಿದೆ–ಹಿಮಗಿರಿ. ವಿಶ್ವದಲ್ಲೇ ಅತ್ಯಂತ ಎತ್ತರವಾದ ಗಿರಿಶಿಖರಗಳಿಂದ ಕೂಡಿರುವ ಈ ಹಿಮಾ ಲಯ ಪರ್ವತದ ಸ್ಥಾನ ಕೂಡ ಅಷ್ಟೇ ಬಿತ್ತರವಾದುದು- ಎಂದು ಹೇಳಿದರೆ ಅತಿಶಯೋಕ್ತಿಯಾಗಲಾರದು. ಇಂತಹ ''ಹಿಮಗಿರಿ"ಯು ಅಮರವಾದ ಶಕ್ತಿ–ಕೀರ್ತಿ ಗಳನ್ನು ಹೊಂದಿದೆ; ಎಷ್ಟೆಂದರೆ ''ಗೌರಿಶಂಕರದಷ್ಟು"! ಧನ್ಯ ಹಿಮವಂತ!!



# ಜಯಶ್ರೀ ಲೆ——————

# ಸುಗ್ಗಳೆ

ಲೇಖಕಿ :
ಶ್ರೀಮತಿ ಸುಲೋಚನಾ ನಾಗರಾಜ್
ಬೆಂಗಳೂರು

ಹನ್ನೆರಡನೆಯ ಶತಮಾನ ಶಿವಭಕ್ತೆಯರ ಕಾಲ. ಉಡುತಡಿಯ ಅಕ್ಕಮಹಾದೇವಿ, ಕಾಶ್ಮೀರ ಮಹಾದೇವಿ, ಕಾರಿಕಾಲಮ್ಮೆ ಮುಂತಾದ ಶಿವಶರಣೆಯರು ಹುಟ್ಟಿ ಬಾಳಿ ಬೆಳಗಿದ ಕಾಲ. ಅದಕ್ಕೂ ಹಿಂದೆ ಈ ಎಲ್ಲಾ ಶರಣೆಯರಿಗೆ ಹಿನ್ನೆಲೆಯಾಗಿ, ಆದರ್ಶ ಸತಿಯಾಗಿ ಬಾಳಿ, ಬೆಳಕದಾರಿ ತೋರಿದವಳೆಂದರೆ ಜಗದೇಕವೀರ ಜೈನಚಕ್ರವರ್ತಿ ಜಯಸಿಂಹ ಮಹಾರಾಜನ ಧರ್ಮಪತ್ನಿ ಸುಗ್ಗಳಾದೇವಿ. ಜನ್ಮತಃ ಶಿವಭಕ್ತೆಯಾದ ಸುಗ್ಗಳೆ ಮಹಾದೇವಿಯಕ್ಕನಂತೆ ಬಲಾತ್ಕಾರ ಪೀಡಿತಳಾಗಿ ಜೈನ ಅರಸನನ್ನು ಕೈಹಿಡಿದವಳೆಂದು ಪ್ರತೀತಿ. ಎಂದೇ ಈ ಬಲಾತ್ಕಾರದ ಘರ್ಷಣೆಯಲ್ಲಿ ಆಕೆಯ ತಾಯಿತಂದೆಗಳ ಸುಳಿವೇ ಸಿಗುವುದಿಲ್ಲ. ಮಹಾದೇವಿಯಕ್ಕ ಕೌಶಿಕ ಮಹಾರಾಜನನ್ನು ಲಗ್ನವಾದಳೋ ಅಥವಾ ಕರಾರು ಮಾಡಿಕೊಂಡು ಮೂರು ತಪ್ಪುಗಳನ್ನು ಆತನಲ್ಲಿ ಕಾಣುವವರೆಗೆ ಆತನರಮನೆಯಲ್ಲಿದ್ದಳೋ ಅದು ಬೇರೆ ಪ್ರಶ್ನೆ. ಅವಳು ಆತನಿಂದ ಸಿಡಿದೆದ್ದು ವಿರಕ್ತೆಯಾಗಿ ಊರನ್ನೇ ತೊರೆದು ಕಾಡಿನತ್ತ ಹೋಗಿ ತನ್ನ ಮನದನ್ನನನ್ನು ಕಾಣಲು ಸಾಧಿಸಿ ಜಯಗಳಿಸಿದ್ದಂತೂ ನಿಜ. ಆದರೆ ಸುಗ್ಗಳೆ ಅಂತಾಗಲಿಲ್ಲ. ತನ್ನ ಮತವಲ್ಲದ ಜೈನ ಚಕ್ರವರ್ತಿಯನ್ನೇ ಕೈಹಿಡಿದರೂ ತನ್ನ ಶಕ್ತಿ ಸಾಮರ್ಥ್ಯಗಳಿಂದ ಆತನನ್ನೂ ಆತನ ವಂಶಜರನ್ನೂ ಶಿವಭಕ್ತರನ್ನಾಗಿ ಮಾಡಿ ಇಹಪರಗಳೆರಡರಲ್ಲಿಯೂ ಜಯಶಾಲಿಯಾಗಿ ಬಾಳಿದವಳು ಸುಗ್ಗಳೆ. ದೇವರ ದಾಸಮಯ್ಯನಂತಹ ಜ್ಞಾನ–ದಾಸೋಹ ಚಕ್ರವರ್ತಿ ಶೈವಾಚಾರ್ಯನನ್ನು ಗುರುವನ್ನಾಗಿ ಪಡೆದು, ಆತನ ಕೀರ್ತಿಯ ಮೇರು ಪರ್ವತವಾಗಿ ಮೆರೆದವಳು ಸುಗ್ಗಳೆ. ನಿಜಕ್ಕೂ ಹೆಣ್ಣಾದ ಅವಳ ಸಾಹಸ ಅದ್ವಿತೀಯವಾದುದೇ.

ಹನ್ನೊಂದನೆಯ ಶತಮಾನದ ಮೊದಲ ಭಾಗದಲ್ಲಿ ಚಾಳುಕ್ಯ ಚಕ್ರವರ್ತಿ ಜೈನ ವಂಶಜನಾದ ಜಯಸಿಂಹರಾಜನು ಕಲ್ಯಾಣಕ್ಕೆ ರಾಜಧಾನಿಯಾಗಿದ್ದ ಪೊಟ್ಟಲಕೆರೆಯಲ್ಲಿ ಆಳುತ್ತಿದ್ದನ್ನು. ತನ್ನ ಅಮಿತ ಶಕ್ತಿ ಸಾಮರ್ಥ್ಯಗಳಿಂದ ಚೋಳರಾಜ್ಯವನ್ನೂ ವಶಪಡಿಸಿಕೊಂಡು ಕೀರ್ತಿ ಪತಾಕೆಯನ್ನು ಹಾರಿಸಿದ್ದನು. ಈತನ ಕಾಲದಲ್ಲಿ ಪೊಟ್ಟಲಕೆರೆಯಲ್ಲಿ ಜೈನ ಬಸದಿಗಳೇ ಏಳುನೂರು ! ಆತನ ವಂಶಜರು ಇಪ್ಪತ್ತೈದು ಸಹಸ್ರ ! ಇಷ್ಟರ ಮೇಲೆ ಮಿಗಿಲಾದ ಸಂಪತ್ತು. ಸುಂದರಿಯೂ, ದೈವಭಕ್ತೆಯೂ, ಸುಗುಣಿಯೂ ಆದ ಮಹಾರಾಣಿ ಸುಗ್ಗಳೆ. ಆತ ಸ್ವರ್ಗ ಸುಖವನ್ನು ಅನುಭವಿಸುತ್ತಿದ್ದ ಕಾಲವದು.

ಹುಟ್ಟ ಶಿವಭಕ್ತೆಯಾದ ಪಟ್ಟದರಸಿ ಸುಗ್ಗಳೆಯ ಮನಸ್ಸು ಮಾತ್ರ ತನ್ನ ಅರಸಿ ಪಟ್ಟದ ವೈಭೋಗದಲ್ಲಾಗಲೀ ಮಿಗಿಲಾದ ಸಂಸಾರ ಸುಖದಲ್ಲಾಗಲೀ ಇಲ್ಲ. ಅನವರತವೂ ಶಿವನಧ್ಯಾನ. ಶಿವಾಚಾರದಲ್ಲಿ ಪೂರ್ಣ ಅನುಭಾವಿಯಾಗಬೇಕು. ಪರಮ ಗುರುವನ್ನು ಪಡೆದು ಆತನ ಚರಣದಡಿಯ ಶಿಷ್ಯಳಾಗಬೇಕು. ಗುರುದೇವನ ಅಮೃತ ವಾಣಿಯುನ್ನು ಶ್ರೇಷ್ಠ ಅನುಭಾವವನ್ನು ತನ್ನಾಚರಣೆಯಲ್ಲಿ ತರಬೇಕು. ನಿತ್ಯಾರಾಧನೆ, ಜಂಗಮ ದಾಸೋಹ ನಡೆಸಬೇಕು ಇದೇ ಅವಳ ಎಡೆಬಿಡದ ಹಂಬಲ. ಹಗಲಿರುಳು ಕನವರಿಕೆ. ಇದೇ ವೇಳೆಗೆ ಪ್ರಚಂಡ ಜ್ಞಾನಿಯೂ, ದಿವ್ಯಾನುಭವಿಯೂ, ಅನುದಿನದ ನೇಯ್ಗೆಯ ಕಾಯಕನಿರತನೂ ಆದ ದೇವರ ದಾಸಮಯ್ಯನ ಕೀರ್ತಿ ನಾಡಿನಲ್ಲೆಲ್ಲಾ ಹರಡಿತ್ತು. ಆತನ ಶಿಷ್ಯವೃಂದ ಆತನ ವಚನಾಮೃತವನ್ನು ಹಾಡಿಹಾಡಿ ನಲಿಯುತ್ತಾರೆ. ಈ ಅಮೃತವಾಣಿಯನ್ನು ಕೇಳಿದಂದೇ ಸುಗ್ಗ

ಳಿಯು ಮನ ತಾನೂ ದೇವರ ದಾಸಮಯ್ಯನ ಶಿಷ್ಯಳಾಗ ಬೇಕೆಂದು ಮಾರುಹೋಯಿತು. ಆತನಿಂದಲೇ ದೀಕ್ಷಾ ಸಂಸ್ಕಾರ ಪಡೆಯಲು ದೃಢಚಿತ್ತಳಾದಳು. ತನಗೆ ಲಿಂಗ ಪೂಜಾವಿಧಾನ ಏನೇನೂ ಬರದು. ಸಂಸ್ಕಾರವಿಲ್ಲದ, ತಿಳಿದು ಮಾಡದ ಪೂಜೆ ಅದೊಂದು ಬರೀ ಅಂಗಾಂಗ ಚಲನೆ ಎಂದವಳ ಹೃದಯ ಹಲುಬಿ ಹಂಬಲಿಸಿತು. ಭಕ್ತ ಭಾಂದವನಾದ ಮುದನೂರು ರಾಮನಾಥನು ಅವಳ ಹಂಬಲಕ್ಕೆ ಕರಗಿ, ಸ್ವಪ್ನದರ್ಶನ ನೀಡಿ, ''ಶಿವಾನುಭವಿ ದೇವರ ದಾಸಮಯ್ಯನ ಶಿಷ್ಯಳಾಗು, ನಿನಗೆ ಸರ್ವಮಂಗಳ ವಾಗುತ್ತದೆಂದು" ಮತ್ತೂ ಅವಳ ಹಂಬಲಕ್ಕೆ ನೀರೆರೆದು ಪೋಷಿಸಿದ. ಗಡಿಬಿಡಿಯಿಂದ ಎಚ್ಚೆತ್ತು ತನ್ನ ತಾನೇ ಹಿಡಿಯಲಾರದವಳಾದ ಸುಗ್ಗಳೆ ಆ ಕ್ಷಣವೇ ದೂತ ನೊಬ್ಬನನ್ನು ಮುದುನೂರಿಗೆ ಕಳುಹಿಸಿದಳು. ಇತ್ತ ದಾಸಮಯ್ಯನಿಗಾದರೂ ಅವಳದೇ ಪರಿಸ್ಥಿತಿಯಾಗುತ್ತದೆ. ಆತನಿಗೂ ಸ್ವಪ್ನದರ್ಶಿಯಾದ ಆತನೊಡೆಯ ರಾಮ ನಾಥ ಅಪ್ಪಣೆ ಮಾಡಿದ್ದಾನೆ. ಪೊಟ್ಟಲಕೆರೆಗೆ ಹೋಗು, ನಿನ್ನ ಕರುಣೆಗಾಗಿ ತವಕಿಸುತ್ತಿರುವ ಸುಗ್ಗಳೆಗೆ ಶಿವ ದೀಕ್ಷಾ ಅನುಗ್ರಹಮಾಡಿ ಗುರುವಾಗು" ಎಂದು.

ದೂತನನ್ನು ಅನುಸರಿಸಿ ಬಂದ ದಾಸಮಯ್ಯನಿಗೆ ನಡುದಾರಿಯಲ್ಲಿ ನೂರೆಂಟು ವಿಘ್ನಗಳು. ಆತನ ಆತ್ಮೋ ನ್ನತಿ, ಕೀರ್ತಿ ಜನಪ್ರಿಯತೆಯನ್ನು ಕಂಡು ಕರುಬಿದ ಜೈನಮುನಿಗಳು ಒಡ್ಡಿದ ಅನೇಕ ತೊಂದರೆಗಳನ್ನು ಜಯಿಸಿ ಬಂದ, ದಾಸಮಯ್ಯನನ್ನು ಕಂಡ ಸುಗ್ಗಳೆಯ ಭಕ್ತಿ ಪ್ರವಾಹವಾಗಿ ಧುಮ್ಮಿಕ್ಕುತ್ತದೆ. ದಾಸಮಯ್ಯ-ಸುಗ್ಗಳೆಯರ ಭಕ್ತಿ ಸಂಸ್ಕಾರ ಸಮಾಗಮ ತುದಿ ಮೊದ ಲಿಲ್ಲದ್ದಾಗುತ್ತದೆ. ಆತನ ಅಪರೂಪ ಜ್ಞಾನಸಂಪತ್ತು ಆಳವಾದ ಪ್ರತಿಭೆಗೆ ಮನದುಂಬಿ ಭಾವೋದ್ವೇಗದಿಂದ ಮೂಕಳಾಗಿ ಮೈಮರೆತ ಸುಗ್ಗಳೆಯನ್ನು ದಾಸಮಯ್ಯ ಎಚ್ಚರಿಸುತ್ತಾನೆ ಎಂತು ?....

''ಹಸಿವಿಲ್ಲದ ಬೊಂಬೆಗೆ
ತೃಷೆಯಿಲ್ಲದ ನೀರೆರೆದು,
ಮುಸಕವಿಲ್ಲದ ಮಾತ ಮನದಲ್ಲಿ ಹೇಳಿ
ಹೆಸರಿಲ್ಲದೆ ಕರೆದೊಡೆ
ಓ ಎಂಬವ ನಾನೋ ನೀನೋ ರಾಮನಾಥ ?"

ನೈಜಸ್ಥಿತಿಗೆ ಬಂದು ಮುಟ್ಟಿದ ಸುಗ್ಗಳೆ ಉತ್ತರಿಸು ತ್ತಾಳೆ ಅಷ್ಟೇ ಜಾಣತನದಿಂದ....

''ಮಣ್ಣಿಲ್ಲದ ನೆಲದಲ್ಲಿ
ಜಡವಿಲ್ಲದ ಜಲವನೆರೆದು
ಮುಸಕದ ಮುಸುಕಿಲ್ಲದ ಮುಗಿಲ ಬಳಸಿ
ಬೀಜವಿಲ್ಲದ ಅಂಕುರವ ನಾಟಿ
ನಾಟಿಯಿಲ್ಲದ ಸೊಗವಣ್ಣ ವಿತ್ತಾತ
ಎನ್ನ ಪ್ರಿಯ ಜಯರಾಮನಾಥನಲ್ಲದೆ ಮತ್ತಾರು
ಹೇಳಾ ?"

ಹೀಗೆ ಅಪೂರ್ವವಾದ ದಾಸಮಯ್ಯ-ಸುಗ್ಗಳೆಯರ ಭಕ್ತಿ ಸಂಸ್ಕಾರ ಹೃದಯ - ಹೃದಯವನ್ನು ಮುಟ್ಟೆ ಸುಗ್ಗಳೆ ದಾಸಮಯ್ಯನಿಂದ ಶಿವದೀಕ್ಷೆಪಡೆದು ಪರಮ ಗುರುವಿನ ಪ್ರಿಯಶಿಷ್ಯೆಯಾಗುತ್ತಾಳೆ.

''ಆಯತವಕಂಡೆ, ಸ್ವಾಯತವ ಕಂಡೆ
ಸನ್ನಿಹಿತವ ಕಂಡೆ, ಸಚ್ಚಿದಾನಂದ ಶ್ರೀ ಗುರುವ
ಕಂಡೆ,
ಆಹಾ ಎನ್ನ ಪುಣ್ಯವೇ, ಆಹಾ ಎನ್ನ ಭಾಗ್ಯವೆ
ಆಹಾ ಎನ್ನ ಪ್ರಿಯ ಜಯ ರಾಮನಾಥಾ
ನೀನೆನಗೆ ದೊರಕೊಂಡು ಧನ್ಯಳಾದೆ." ಎಂದು

ಮನವಾರೆ ಹಾಡಿ ಹರುಷಿಸುತ್ತಾಳೆ.

ಒಳ್ಳೆಯ ಕಾರ್ಯಕ್ಕೆ ಅಡೆತಡೆಗಳು ಹಲವಾರು. ಅಂತೆಯೇ ಜೈನ ಚಕ್ರವರ್ತಿ ಮಡದಿಯಾದ ಮಹಾ ರಾಣಿ ಜೈನಳಾಗಿರಬೇಕಲ್ಲದೆ ಶಿವದೀಕ್ಷೆಪಡೆದು ಶಿವಭಕ್ತೆ ಳಾದದ್ದು ಸಾಮಾನ್ಯ ಸಂಗತಿಯೆ ?....ಕಾಳ್ಗಿಚ್ಚಿನಂತೆ ಹಬ್ಬಿದ ಸುದ್ದಿ ಜಿನಭಕ್ತರ ಒಡಲುರಿಸಿತು. 'ವಿನಾಶ ಕಾಲೇ ವಿಪರೀತ ಬುದ್ಧಿ' ಎನ್ನುವಂತೆ ಜೈನಗುರುವಾದ ಸರ್ವಜ್ಞಮುನಿಯೂ ಕೆರಳಿ ರಾಜನಿಗೆ ದೂರಿಡುತ್ತಾನೆ. ''ದಾಸಮಯ್ಯ ಮತ ಪ್ರಚಾರಕ, ಜಿನಭಕ್ತರನೆಲ್ಲ ಶಿವ ಭಕ್ತರನ್ನಾಗಿ ಮಾಡುತ್ತಿದ್ದಾನೆ ಇದಕ್ಕೆ ರಾಣಿಯೇ ಪ್ರಥಮಸಾಕ್ಷಿ. ಎಂದಮೇಲೆ ಆತನ ಧೈರ್ಯ ಮೀರಿದ್ದೇ.. ರಾಣಿಗಾದರೂ ಯುಕ್ತಾ ಯುಕ್ತಾ ಪರಿಜ್ಞಾನ ವಿದ್ದಂತಿಲ್ಲ. ಪತಿಯಾಜ್ಞೆಯಿಲ್ಲದೆ ಸತಿ ಸ್ವಾತಂತ್ರ್ಯ ವಹಿಸುವುದೆಂದರೆ ಅಕ್ಷಮ್ಯ ಅಪರಾಧವೇ ಸರಿ....ಇದೆಲ್ಲ ದರ ವಿಚಾರಣೆ,ಆಗಲೇಬೇಕೆಂಬುದು ಸರ್ವಜ್ಞ ಮುನಿಯ ಆಹವಾಲಾಗುತ್ತದೆ.

ರಾಗದ್ವೇಷವುಳ್ಳ ಉಪ್ಪುಕಾರ ತಿನ್ನುವ ಮಾನವ ಚಾಡಿ ಮಾತಿಗೆ ಮರುಳಾಗುವುದು ಬಹಳಬೇಗ. ಇದಕ್ಕೆ ಚಕ್ರವರ್ತಿಯೇನೂ ಹೊರತಾಗುವುದಿಲ್ಲ. ಲಿಂಗ ಪೂಜೆ

ಯಲ್ಲಿ ತಲ್ಲೀನಳಾಗಿ ಆನಂದದಿಂದ ಪೂಜೆಗೈಯುತ್ತಿದ್ದ ಪತ್ನಿಯನ್ನು ಅಡ್ಡಿಪಡಿಸುತ್ತಾನೆ ಮಹಾರಾಜ. ಜಿನ ಮತಕ್ಕೆ ಲಿಂಗಪೂಜೆ ಹೊರತೆಂದು." ನಿರ್ವಿಕಾರವಾಗಿ ಉತ್ತರವೀಯುತ್ತಾಳೆ ಸುಗ್ಗಳೆ " ನಿಜ ಪ್ರಭೂ. ಆದರೆ ಗುರು – ಶಿಷ್ಯೆಯರಿಗೊಂದು ಮತವಿರಬೇಕಲ್ಲವೇ ?.... ನಿಮ್ಮ ಸರ್ವಜ್ಞ ಮುನಿಗಳು ಸರ್ವ ಸಮಾನ ದೃಷ್ಟಿಯುಳ್ಳವರಲ್ಲ. ನಮ್ಮ ನಮ್ಮಲ್ಲೇ ಬಿರುಕು ಹುಟ್ಟಿಸುತ್ತಾರೆ. ಹೆಣ್ಣಾದ ಮಾತ್ರಕ್ಕೆ ಅವಳಿಗೆ ಸ್ವಾತಂತ್ರವೇ ಇಲ್ಲ. ಧರ್ಮಾಧಿಕಾರದ, ಆತ್ಮೋನ್ನತಿಯ ಮಾರ್ಗವೇ ಇಲ್ಲವೆಂದವರ ಮತ. ಈ ಪಕ್ಷಪಾತ ನನಗೆ ಒಗ್ಗದು ಪ್ರಭೂ. ಇದೇಕೆ ನಿಮಗೆ ಹೊಳೆಯುವುದಿಲ್ಲ" ಎನ್ನುತ್ತಾಳೆ. ನಿಜವನ್ನರಿತು ಸ್ವಲ್ಪ ಮಟ್ಟಿಗೆ ತತ್ತರಿಸಿದ ರಾಜ ತೋರಗೊಡವೆ ವಿನಯದಿಂದ ಆಡಿನೋಡಿದ ಪತ್ನಿಯನ್ನೊಲಿಸಿಕೊಳ್ಳಲು ಸತಿ ಅವಲಂಬಿಸಬೇಕಾದದ್ದು ಪತಿಯ ಮತವನ್ನಲ್ಲವೇ ?....ಆತನೇ ಆಕೆಗೆ ದೇವರಲ್ಲವೇ ?".... ಎಂದು ಕೊನೆಗೆ ಬಗ್ಗದ ಸತಿಯನ್ನು ಬೆದರಿಸಿ ನೋಡುತ್ತಾನೆ ಮಹಾರಾಜ. ಪತಿಯಾಜ್ಞೆ ಮೀರಿದರೆ ಸತಿಗೆ ನರಕ. ಇದು ಮಹಾರಾಣಿಯಾದವಳಿಗಂತೂ ಎಷ್ಟು ಮಾತ್ರಕ್ಕೂ ಸಲ್ಲದೆಂದು." ಶಿವಭಕ್ತೆ ಅಚಲೆ ಎಂದೇ ಗಂಭೀರಳಾಗಿ ನುಡಿಯುತ್ತಾಳೆ ಸುಗ್ಗಳೆ. ತನ್ನ ದೃಢನಿಶ್ಚಯವನ್ನು ಪ್ರಭೂ ಶರಣ ಸತಿಗೆ ಲಿಂಗವೇ ನಿಜವಾದ ಪತಿ. ನಾನು ಹುಟ್ಟಿದೊಡನೆಯೇ ಆ ಲಿಂಗ ದೇವನು ನನ್ನಂಗವನ್ನು ಅಲಂಕರಿಸಿರುವುದರಿಂದ ನಿಮಗಿಂತ ಮೊದಲು ಆತನೇ ನನ್ನ ನಿಜವಾದ ಪತಿ. ಎಂದ ಮೇಲೆ ಘನಗಾರ ಹಂಗಿಲ್ಲ. ಗುರು ಲಿಂಗ ವಚನ ಮೀರಿದರೆ ನರಕ. ಲಿಂಗವನ್ನು ಬಿಟ್ಟು ನನಗೆ ಅನ್ಯ ದೇವರಿಲ್ಲ. ಆದಕಾರಣ ನೀವೂ ಲಿಂಗವನ್ನು ಧರಿಸಿದರೆ ಆಗ ನಾನು ನಿಮ್ಮ ಅರ್ಧಾಂಗಿ–ಅಂದರೆ ನನ್ನ ಸಮಸ್ತ ಅಂಗಕ್ಕೂ ನೀವಾಗ ಪತಿಯಾಗುವಿರಿ ಇದಕ್ಕೆ ನಿಮ್ಮ ಸಮ್ಮತವಿಲ್ಲವೆಂದಾದರೆ ನಿಮಗೊಪ್ಪುವ ಬೇರೊಬ್ಬ ನಿಮ್ಮ ವಂಶಜಳನ್ನೇ ತಂದು ಲಗ್ನವಾಗಬಹುದು" ಎನ್ನುತ್ತಾಳೆ. ಚಕ್ರವರ್ತಿಗೂ ಸ್ವಾಭಿಮಾನವಿಲ್ಲವೇ ? ಒಬ್ಬ ಬಡ ಜಂಗಮನ ಸಾಕಿಗೆ ಮರುಳಾಗಿ ಆದೂ ತನ್ನ ಪತ್ನಿಯೇ ತನಗೆ ತಿರುಗಿಬಿದ್ದು ಹಠ ಸಾಧಿಸುವುದೆಂದರೆ !....

ಕೋಪೋದ್ರೇಕನಾದ ಚಕ್ರವರ್ತಿ ಹಂಗಿಸುತ್ತಾನೆ.... "ಹುಂ, ಸರ್ವ ಶ್ರೇಷ್ಠನಾದ ನನ್ನ ಸರ್ವಜ್ಞ ಮುನಿಯೆತ್ತ ? _ ಕನಿಷ್ಠವಾದ ಕಾವಿಧಾರಿ ನಿನ್ನ ಬಡ ಜಂಗಮನೆತ್ತ ?....ಎಂದು. ಗುರುನಿಂದೆಯನ್ನು ಸಹಿಸಲಾರದವಳಾದ ಸುಗ್ಗಳೆ ಪ್ರತಿಜ್ಞೆ ಮಾಡುತ್ತಾಳೆ." ಬರೀ ಬಾಯಿ ಮಾತಿನಿಂದ ಉಚ್ಚ–ನೀಚಗಳ ಗುಣ ಗೊತ್ತಾಗುವುದಿಲ್ಲ. ಇವುಗಳ ಇತ್ಯರ್ಥವಾಗಬೇಕಾದರೆ ಒಂದು ವಾದ ಭೂಮಿಯೇರ್ಪಡಿಸಿ. ಆ ವಾದ ಭೂಮಿಯಲ್ಲಿ ನಿಮ್ಮ ಸರ್ವಜ್ಞ ಮುನಿಗಳು ತಮ್ಮ ಮತವೇ ಶ್ರೇಷ್ಠವಾದುದೆಂದು ತೋರಿಸಿಕೊಟ್ಟರೆ ನಾನಾಗ ನಿಮ್ಮ ಅರ್ಧಾಂಗಿಯಾಗಿ ಜೈನಮತವನ್ನು ಸ್ವೀಕರಿಸುತ್ತೇನೆ. ಹಾಗಿಲ್ಲದೆ ಶಿವನೇ ಸರ್ವೋತ್ತಮ, ಶಿವಮತವೇ ಶ್ರೇಷ್ಠವೆಂದು ನನ್ನ ಗುರು ತೋರಿಸಿಕೊಟ್ಟರ ನೀವಾಗ ಲಿಂಗ ಧಾರಿಗಳಾಗಿ ಶೈವಮತವನ್ನು ಸ್ವೀಕರಿಸಬೇಕು."ಭೂಪತಿ ಒಪ್ಪಿದ

ಸಭೆ ನೆರೆಯಿತು .... ಅಖಂಡವಾಗಿ. ಅರಸನ ಒಡ್ಡೋಲಗದಲ್ಲಿ ಆರಂಭವಾಯಿತು ವಾದ್ಯಗೋಷ್ಠಿ "ಹೆಣ್ಣು ಮಾಯೆ, ಅವಳಿಗೆ ಮೋಕ್ಷವಿಲ್ಲ, ಆತ್ಮಸಾಕ್ಷಾತ್ಕಾರದ ಹಕ್ಕೇ ಇಲ್ಲವೆಂದಿತು" ಜಿನಮತ. ದಾಸಮಯ್ಯ ನುಡಿದ ಉತ್ತರವಾಗಿ ಬರೀ ಹೊರದೃಷ್ಟಿಯಿಂದ ಹೆಣ್ಣು-ಗಂಡನ್ನು ನೋಡಬೇಡಿ

" ಮೊಲೆ ಮುಡಿಬಂದರೆ ಹೆಣ್ಣೆಂಬರು
ಗಡ್ಡ ಮೀಸೆ ಬಂದರೆ ಗಂಡೆಂಬರು
ನಡುವೆ ಸುಳಿವಾತ್ಮನು
ಗಂಡೂ ಅಲ್ಲ. ಹೆಣ್ಣೂ ಅಲ್ಲ ಕಾಣಾ ರಾಮನಾಥ"

ಸಾರು ಮಾಡಬೇಕಾದರೆ ನೀರು-ಬೇಳೆ ಎರಡೂ ಬೇಕು. ಸಾರಾದನಂತರ ನೀರು–ಬೇಳೆಯೆಂಬ ಬೇರ್ಪಡೆಯಿಲ್ಲ, ಸತಿ-ಪತಿಗಳೊಂದಾದ ಭಕ್ತಿಯೇ ಶಿವನಿಗೆ ಒಪ್ಪಾದೀತು. ಹೆಣ್ಣು ಕೇವಲ ಮಾಯೆಯೇ ಅಲ್ಲ. ಮಾಯೆಯೂ ಹೌದು. ಮಹಾದೇವಿಯೂ ಹೌದು ಎಂದೇ ಮಾಯೆಯನ್ನೂ ಮಹೇಶ್ವರ ಬಿಟ್ಟಿಲ್ಲ. ಸರ್ವೇಶ್ವರನಾತ. ಎತ್ತನೇರಿದ ಕರ್ತನೊಬ್ಬನೇ ಜಗಕೆಲ್ಲ. ಎತ್ತ ಬೆಳೆದ ಧಾನ್ಯವನುಂಬ ದೇವರ್ಕಳಲ್ಲ ನಿಮ್ಮ ತೊತ್ತಿನ ಮಕ್ಕಳು ಕಾಣಾ ರಾಮನಾಥ." ಎತ್ತು ನಿಮ್ಮದಾನ. ಬಿತ್ತು ನಿಮ್ಮದಾನ, ಸುತ್ತಿ ಹರಿವ ಸಾಗರವೆಲ್ಲ ನಿಮ್ಮ ದಾನ. ನಿಮ್ಮ ದಾನವನುಂಡು ಅನ್ಯರ ಹೊಗಳುವ ಕುನ್ನಿಗಳನೇನೆಂಬೆ ರಾಮನಾಥ ?.... ಎಂದು ನರಳ

ಕಾಗಿ ಸಹಜವಾಗಿ ಮನಮುಟ್ಟುವಂತೆ ಉದಾಹರಿಸುತ್ತಾನೆ ದಾಸಮಯ್ಯ. ಈತನವಾದ ಚಕ್ರವರ್ತಿಗೇ ಅಲ್ಲದೆ ಇಡೀ ಸಭೆಗೆ ಪರಿಣಾಮನ್ನುಂಟುಮಾಡುತ್ತದೆ. ಹೀಗೆ ಇತ್ತಂಡಕ್ಕೂ ಬಿರುಸಾದ ವಾದ ನಡೆದು ಅಂತಿಮವಾಗಿ ಜಿನ ಮತಕ್ಕೇ ಸೋಲಾಗುವ ಪ್ರಸಂಗ ಬಂದಾಗ ಕೊನೆಗಾದರೂ ತಮ್ಮ ದುರಭಿಮಾನವನ್ನು ಬಿಡದ ಆ ತಂಡ ಮೊದಲೇ ಸಿದ್ಧಗಡಿಸಿಟ್ಟುಕೊಂಡಿದ್ದ ಒಳಗೆ ಕ್ರೂರ ಸರ್ಪವಿದ್ದ ಕೊಡವೊಂದನ್ನು ತಂದು ಮುಂದಿಟ್ಟು ಹೇಳುತ್ತಾರೆ. ಶಿವನೇ ಸರ್ವೋತ್ತಮ, ಅಣುರೇಣು ವ್ಯಾಪಕನೆಂದು ಹೇಳುವ ನಿನ್ನ ಮಾತು ನಿಜವಾಗಿದ್ದರೆ ಈ ಕೊಡದೊಳಗೆ ನಿನ್ನ ಶಿವನನ್ನು ತೋರಿಸು ಎಂದು. ಭವಿಷ್ಯವನ್ನರಿತು ಎದುರುಪಕ್ಷದ ದುರಾಲೋಚನೆಯನ್ನು ಗ್ರಹಿಸಿದ ದಾಸಮಯ್ಯ ಅಳುಕದೆ ಮನದಲ್ಲಿ ತನ್ನ ಆರಾಧ್ಯದೈವ ರಾಮನಾಥನನ್ನು ನೆನೆಯುತ್ತ ಕೊಡದೊಳಗೆ ಕೈ ಹಾಕಿ ಬುಸುಗುಟ್ಟುತ್ತಿದ್ದ ಸರ್ಪವನ್ನು ಹೊರತೆಗೆಯುತ್ತಾನೆ. ನೆರೆದ ಸಭೆ ಆಶ್ಚರ್ಯದಿಂದ ಹಾಹಾಕಾರ ಮಾಡುತ್ತಿರಲು ಆತನ ತದೇಕ ಚಿತ್ತದಿಂದ, ಸ್ಪರ್ಶಮಾತ್ರದಿಂದ ಅದು ಸ್ಫಟಿಕ ಲಿಂಗವಾಗುತ್ತದೆ. ಮನಸ್ಸಿನಂತೆ ಮಹಾದೇವ, ಸಭೆ ಜಯಕಾರ ಮಾಡುತ್ತದೆ. ಭಕ್ತಿ ವಿಜಯೋತ್ಸಾಹಗಳಿಂದ ಓಡಿಬಂದು ಗುರುಚರಣಕ್ಕೆರಗಿದ ಸುಗ್ಗಳೆಯನ್ನನುಸರಿಸಿ ಮಹಾರಾಜನೂ ಶರಣು ಹೊಯ್ಯುತ್ತಾನೆ. ಇದು ಮಹಾಸಾಧ್ವಿ ಸುಗ್ಗಳೆಯ ವಿಜಯ.

ಆಗಲೇ ದಾಸಮಯ್ಯನಿಂದ ಶಿವದೀಕ್ಷೆ ಪಡೆದು ಲಿಂಗಧಾರಿಯಾದ ಜಯಸಿಂಹರಾಜ ಇಪ್ಪತ್ತುಸಾವಿರ ಮಂದಿ ತನ್ನ ಕುಲಸ್ಥರಿಗೂ ಶಿವಸಂಸ್ಕಾರವನ್ನೊದಗಿಸುತ್ತಾನೆ. ಏಳುನೂರು ಜೈನ ಬಸದಿಗಳು ಶಿವಮಂದಿರಗಳಾಗುತ್ತವೆ. ಚಾಳುಕ್ಯ ಚಕ್ರವರ್ತಿ ಜಿನಭಕ್ತನನ್ನು ವೀರಶೈವ ಚಕ್ರವರ್ತಿಯನ್ನಾಗಿಮಾಡಿದ ಸುಗ್ಗಳೆಯ ಸಾಹಸ, ದಾಸಮಯ್ಯನ ಮಹಿಮೆ ಅಪಾರವಾದದ್ದು. ಮಹಾರಾಜ ದಾಸಮಯ್ಯನನ್ನು ರಾಜಗುರುವನ್ನಾಗಿ ಪಡೆದನಂತರ ಸಾಂಪ್ರದಾಯಿಕದಂತೆ, ರಾಜಮರ್ಯಾದೆ ಒಪ್ಪುವಂತೆ. ಗುರುಕಾಣಿಕೆಯಾಗಿ ಕನಕ ರತ್ನಾದಿಗಳನ್ನು ಗುರುಚರಣದಲ್ಲಿಟ್ಟು ವಂದಿಸಿದ ಮಹಾರಾಜನನ್ನು ಕಂಡು ದಾಸಮಯ್ಯ ನಕ್ಕ. ‘‘ ಮಹಾರಾಜ, ನಿನ್ನ ರಾಜ್ಯದಾಸೆಗಾಗಲೀ, ಧನಕನಕಾದಿಗಳ ಮೋಹದಿಂದಾಗಲೀ ಬಂದವ ನಾನಲ್ಲ....

“ ಕರಿಯ ನಿತ್ತೊಡೆ ಒಲ್ಲೆ, ಸಿರಿಯ ನಿತ್ತೊಡೆ ಒಲ್ಲೆ,
ಹಿರಿದಪ್ಪ ರಾಜ್ಯವನಿತ್ತೊಡೆ ಒಲ್ಲೆ
ಶರಣರ ಸೂಳ್ನುಡಿಯ ಒಂದರಗಳಿಗೆ ಇತ್ತಡೆ
ನಿಮ್ಮನಿತ್ತೆ ಕಾಣಾ ರಾಮನಾಥ ”....

ನನ್ನ ನೇಯ್ಗೆಯ ಕಾಯಕ ನನಗೆ ಅಮಿತವಾಗಿದೆ- ಆನಂದದಾಯಕವಾಗಿದೆ. ಅದೇ ನನಗೆ ಸರ್ವಸಂಪತ್ತು. ನೀನು ನನಗೆ ಕಾಣಿಕೆಯಾಗಿ ಕೊಡಲೇ ಬೇಕೆಂಬುದಿದ್ದರೆ ಇನ್ನುಮುಂದೆ ನಿನ್ನ ಅರಮನೆಯಲ್ಲಿ ಆಗಾಗ ಶಿವಶರಣರ ಸಮ್ಮೇಳನವನ್ನು ಕೂಡಿಸು. ದಿನದ ಅಲ್ಪಕಾಲವಾದರೂ ಶರಣರ ಅನುಭವಾಮೃತ ಜನರ ಕಿವಿಮುಟ್ಟುವಂತೆ ಮಾಡು.... ನೀನಿಂತು ಆಚರಿಸಿದರೆ ನನ್ನ ಕಾಣಿಕೆ ನನಗೆ ಸಂದಂತೆ— ಎನ್ನುತ್ತಾನೆ ನಿರ್ಮೋಹಿ ದಾಸಮಯ್ಯ. ಅಂದಾತ ಮನಗೊಟ್ಟದ್ದರೆ ಅರ್ಧರಾಜ್ಯದೊಡೆಯನಾಗಬಹುದಿತ್ತು. ಆತ್ಮಸಂಸ್ಕಾರವುಳ್ಳ, ತನ್ನ ಪ್ರತಿಭೆಗೆ ಜ್ಞಾನಸಂಪತ್ತಿಗೆ ತಕ್ಕ ಪಾರ್ವತೀ ಪರಮೇಶ್ವರರಂತಹ ರಾಜದಂಪತಿಗಳ ಆತ್ಮಾರ್ಪಣವನ್ನೇ ಕಾಣಿಕೆಯಾಗಿ ಪಡೆದ ಆತನಿಗೆ ಈ ಕನಿಷ್ಟ, ಕ್ಷಣಿಕ ರಾಜ್ಯದ, ಧನದ ಆಸೆ ಎತ್ತಣದು ?....

ಮಹಾ ಮಹಿಮಳಾದ ಸುಗ್ಗಳೆಯಿಂದಲೇ ತನ ನಿಧಿ ದೇವರ ದಾಸಮಯ್ಯನ ದಿವ್ಯಶಕ್ತಿ, ದಿವ್ಯಾನುಭವ ಹೊರಬಿದ್ದದ್ದು. ಆಕೆಯ ಗುರುವಾದ ನಿಮಿತ್ತದಿಂದಲೇ ಆತನ ನಿಜ ವೃತ್ತಾಂತ ಸಮಾಜಕ್ಕೆ ತಿಳಿಯಲ್ಪಟ್ಟದ್ದು. ಆಕೆಯ ಸತ್ಯಸಾಧನೆಯಿಂದ ಜಿನಭಕ್ತರು ಶಿವಭಕ್ತರಾಗಿ ಬಸದಿಗಳು ಶಿವಾಲಯಗಳಾಗಿ ಪೊಟ್ಟಲಕೆರೆಯ ಇತಿಹಾಸ ಪವಿತ್ರವಾದದ್ದು. ಇದನ್ನು ತಿಳಿದವರೆಷ್ಟು ಮಂದಿ ?....

ಅವಳು ಸಂಸಾರ ಬಿಡಲಿಲ್ಲ. ಕಾಡಿಗೆ ಹೋಗಲಿಲ್ಲ. ತನ್ನ ಇಷ್ಟಲಿಂಗದಲ್ಲೇ ಸರ್ವ ಪುಣ್ಯಕ್ಷೇತ್ರ, ಸಮಸ್ತ ಆನಂದವನ್ನೂ ಕಂಡಳು. ಪ್ರಪಂಚ ಪಾರಮಾರ್ಥಗಳೆರಡರಲ್ಲೂ ದಿಗ್ವಿಜಯಿಯಾಗಿ ಆದರ್ಶ ಪತ್ನಿಯಾಗಿ, ಆದರ್ಶ ಶರಣೆಯಾಗಿ ಬಾಳಿದ ಕೀರ್ತಿ ಸುಗ್ಗಳೆಗೇ ಸಲ್ಲತಕ್ಕದ್ದು. ಎಂದೇ ಯಾವುದರಲ್ಲೂ ಸೋಲನ್ನು ಒಪ್ಪದೆ, ಹಿಂಜರಿಯದೆ, ಸತ್ಯಸಾಧನೆಯಿಂದ ಜಯಶೀಲೆಯಾಗಿ ಬಾಳಿದವಳು ಸುಗ್ಗಳೆ.

ಆಧಾರ : ಶ್ರೀ ಜ.ಚ.ನಿ. ಅವರ
‘ಆದರ್ಶ ಶರಣೆ ಸುಗ್ಗಳೆ’

# ಮನೆಯ ಪಾಠಗಳು

ಲೇಖಕರು :

## ಶ್ರೀ ಕೆ. ವೆಂಕಟರಾಮಯ್ಯ

ಶಿಕ್ಷಣ ಕ್ಷೇತ್ರದಲ್ಲಿ ಕೆಲವು ವರ್ಷಗಳಿಂದೀಚೆಗೆ ಮನೆಯ ಪಾಠಗಳು ಮತ್ತು ಕೋಚಿಂಗ್ ಹೋಂಗಳು ಒಂದು ಬಗೆಯ ಸಾಂಕ್ರಾಮಿಕ ರೋಗದಂತೆ ಹರಡಿವೆ. ಅನೇಕ ಶಿಕ್ಷಣ ಪಂಡಿತರು ಈ ರೋಗವನ್ನು ಖಂಡಿಸಿದ್ದಾರೆ. ಆದರೆ ರೋಗಕ್ಕೆ ಕಾರಣಗಳೇನು, ಚಿಕಿತ್ಸೆಯೇನು ಎಂಬುದನ್ನು ಯಾವ ತಜ್ಞರೂ ವಿಮರ್ಶಿಸುತ್ತಿಲ್ಲ. ಈ ರೋಗಕ್ಕೆ ಶಿಕ್ಷಕರು ಮಾತ್ರ ಕಾರಣವೆಂಬಂತೆ ವೇದಿಕೆಗಳ ಮೇಲೆ ಭಾಷಣ ಮಾಡುತ್ತಾರೆ. ಅದು ಸಮಸ್ಯೆಯ ಒಂದು ಮುಖ ಮಾತ್ರ. ಈ ರೋಗದ ಪೂರ್ಣ ಚಿತ್ರವನ್ನು ಪಡೆಯುವುದು ಅವಶ್ಯಕ. ಆಗ ಚಿಕಿತ್ಸೆಯನ್ನೂ ಯೋಚಿಸಲು ಅನುಕೂಲವಾಗಬಹುದು.

ಸುಮಾರು 30ವರ್ಷಗಳ ಹಿಂದೆ ನಾನು ಹೈಸ್ಕೂಲು ವಿದ್ಯಾರ್ಥಿಯಾಗಿದ್ದಾಗ ಶಾಲೆಯ 700 ವಿದ್ಯಾರ್ಥಿಗಳಲ್ಲಿ ಕೇವಲ ಇಬ್ಬರು ಮಾತ್ರ ಮನೆಯ ಪಾಠಗಳನ್ನಿಟ್ಟುಕೊಂಡಿದ್ದರು. ನಾನು ಕಾಲೇಜಿನಲ್ಲಿ ಓದುತ್ತಿದ್ದಾಗ ಇಂಟರ್‌ಮೀಡಿಯಟ್ ತರಗತಿಯಲ್ಲಿ ಒಬ್ಬ ರಾಜಕುಮಾರ ಇಂಗ್ಲೀಷ್ ಭಾಷೆಗೆ ಮಾತ್ರ ತಿಂಗಳಿಗೆ ನೂರು ರೂಪಾಯಿ ತೆತ್ತು ಮನೆಯ ಪಾಠವನ್ನಿಟ್ಟು ಕೊಂಡಿದ್ದನೆಂಬುದು ನಮಗೆಲ್ಲಾ ಒಂದು ಬಗೆಯ ತಮಾಷೆಯಾಗಿತ್ತು. ನಮಗೆ ಶಾಲೆಗಳಲ್ಲಿ ಕಾಲೇಜುಗಳಲ್ಲಿ ತರಗತಿಗಳಲ್ಲಿ ಆಗುತ್ತಿದ್ದ ಪಾಠಗಳೇ ಸಾಕಾಗುತ್ತಿತ್ತು. ನಮ್ಮ ಉಪಾಧ್ಯಾಯರಲ್ಲಿ ಅನೇಕರು ಬಹಳ ದಕ್ಷರಾಗಿರುತ್ತಿದ್ದರು. ಅಯೋಗ್ಯರು ಅಲ್ಪಸಂಖ್ಯೆಯಲ್ಲಿರುತ್ತಿದ್ದರು. ಸಂಜೆಯಾದರೆ ನಮ್ಮ ಉಪಾಧ್ಯಾಯರು ಟೆನ್ನಿಸ್, ಬ್ಯಾಡ್‌ಮಿಂಟನ್ ಮುಂತಾದ ಆಟಗಳಲ್ಲಿ ತೊಡಗುತ್ತಿದ್ದರು. ಮನೆಯ ಪಾಠಗಳ ಅವಶ್ಯಕತೆ ಬಹಳ ಅಪರೂಪವಾಗಿತ್ತು. ಕೇವಲ ಶ್ರೀಮಂತ ಕುಟುಂಬಗಳ ಕೆಲವು ವಿದ್ಯಾರ್ಥಿಗಳು ಒಂದೆರಡು ವಿಷಯಗಳಿಗೆ ಮಾತ್ರ ಮನೆಯ ಪಾಠಗಳನ್ನಿಟ್ಟುಕೊಳ್ಳುತ್ತಿದ್ದರು. ಕೋಚಿಂಗ್ ಹೋಂಗಳ ಹೆಸರೇ ಇರಲಿಲ್ಲ.

ಕೆಲವು ವರ್ಷಗಳಿಂದೀಚೆಗೆ ಮೇಲಿನ ಪರಿಸ್ಥಿತಿ ಪೂರ್ಣವಾಗಿ ತಲೆಕೆಳಕಾಗಿದೆ. ಈಗ ಮನೆಯ ಪಾಠಗಳು ಪ್ರೈಮರಿ ತರಗತಿಗಳಿಂದ ಡಿಗ್ರಿ ತರಗತಿಗಳವರೆಗೆ ಹರಡಿದೆ. ಕೋಚಿಂಗ್ ಹೋಂಗಳಿಗಾಗಲಿ, ಮನೆಯ ಪಾಠಗಳಿಗಾಗಲಿ ಹೋಗದೆ ಇರುವ ವಿದ್ಯಾರ್ಥಿಗಳ ಸಂಖ್ಯೆ ಬೆರಳ ತುದಿಯಲ್ಲಿ ಎಣಿಸುವಷ್ಟು ಮಾತ್ರ!

ಈಗ ವಿದ್ಯಾಭ್ಯಾಸ ಹಳ್ಳಿಹಳ್ಳಿಗೂ ಹರಡಿದೆ. ಅನಕ್ಷರಸ್ಥ ಕುಟುಂಬಗಳಿಂದ ಮೊದಲಬಾರಿಗೆ ಮಕ್ಕಳು ವಿದ್ಯಾರ್ಥಿಗಳಾಗಲು ತೊಡಗುತ್ತಿದ್ದಾರೆ. ಈ ಕುಟುಂಬಗಳಿಂದ ಶಾಲೆಯ ಮುಖಗಳನ್ನು ಕಾಣುತ್ತಿರುವ ''ಪುಣ್ಯ'' ಈಗಿನ ಮಕ್ಕಳ ತಲೆಮಾರಿಗೆ ಲಭಿಸಿದೆ. ಈ ಮಕ್ಕಳಿಗೆ ಶಾಲೆಗಳಲ್ಲಿ ನಡೆಯುವ ಪಾಠಗಳು ಕೂಡಲೇ ಅರ್ಥವಾಗುವುದು ಕಷ್ಟ. ಮನೆಗೆ ಹೋದರೆ ಅವರ ಕುಲಕಸಬುಗಳಲ್ಲಿ ತಂದೆ ತಾಯಿಗಳಿಗೆ ಸಹಾಯಮಾಡುವುದರಲ್ಲಿ ಓದಲು ಅನುಕೂಲವಾಗಲಿ, ಅವಕಾಶವಾಗಲಿ ಸಿಗುವುದಿಲ್ಲ. ಮನೆಯಲ್ಲಿ ಹಿರಿಯರು ಅನಕ್ಷರಸ್ಥರಾದ್ದರಿಂದ ಮಕ್ಕಳಿಗೆ ಯಾವ ಸಹಾಯವನ್ನೂ ನೀಡಲಾಗುವುದಿಲ್ಲ.

ಮನೆಗಳಲ್ಲಿ ಬಡತನದವಾತಾವರಣದಲ್ಲಿ ಮಕ್ಕಳಿಗೆ ಪಠ್ಯಪುಸ್ತಕಗಳಾಗಲಿ, ಸಾಕಷ್ಟು ನೋಟ್ ಬುಕ್ಕುಗಳಾಗಲಿ ಇರುವುದಿಲ್ಲ. ಅವರು ಶಾಲೆಯಲ್ಲಿ ಉಪಾಧ್ಯಾಯರ ಎದುರು ಎಷ್ಟು ಕಲಿಯುತ್ತಾರೋ ಅಷ್ಟೇ! ಅನೇಕ ವಿದ್ಯಾರ್ಥಿಗಳು ಶಾಲೆಗೂ ಸರಿಯಾಗಿ ಬರುವುದಿಲ್ಲ. ಅನೇಕ ಪಾಠಗಳು ಅವರಿಗೆ ನಡುನಡುವೆ ತಪ್ಪಿ ಹೋಗುವುದರಿಂದ ಮುಂದಿನ ಪಾಠಗಳು ಅರ್ಥವಾಗುವುದಿಲ್ಲ. ಅವರು ದಿಕ್ಕು ತೋಚದಂತೆ ಒದ್ದಾಡುತ್ತಾರೆ.

ಅನೇಕ ಶಾಲೆಗಳಲ್ಲಿ ದಕ್ಷರಾದ ಉಪಾಧ್ಯಾಯರ ಸಂಖ್ಯೆ ಬಹಳ ಕಡಿಮೆ. ಲೈಬ್ರರಿ ಸೌಕರ್ಯಗಳು, ಲ್ಯಾಬರೇಟರಿ ಸೌಕರ್ಯಗಳು ಇರುವುದಿಲ್ಲ. ಈಗ ಬರುತ್ತಿರುವ ಮಕ್ಕಳಿಗೆ ಈ ಸೌಕರ್ಯಗಳು ಹೆಚ್ಚು ಆವಶ್ಯಕ. ಏಕೆಂದರೆ ಶಾಲೆಯೇ ಅವರಿಗೆ ಇರುವ ಏಕೈಕ ಸೌಕರ್ಯ. ವಿಜ್ಞಾನದ ಪಾಠಗಳು ಪ್ರಯೋಗಗಳಿಲ್ಲದೆ ಶಂಕರಾಚಾರ್ಯರ ಅದ್ವೈತವಾದದಂತೆ ಹಿಡಿಸುವುದು ಅಸಾಧ್ಯ. ನಮ್ಮ ವಿದ್ಯಾರ್ಥಿಗಳು ಅನೇಕ ಶಾಲೆಗಳಲ್ಲಿ, ಕಾಲೇಜುಗಳಲ್ಲಿ ಪ್ರಯೋಗಗಳನ್ನು ನೋಡದೆಯೇ, ಮಾಡುವುದು ಹೋಗಲಿ, ವಿಜ್ಞಾನಿಗಳಾಗಬೇಕಾಗಿದೆ.

ಮೊದಲು ಇಂಗ್ಲೀಷ್ ಭಾಷೆಗೆ ಹೈಸ್ಕೂಲಲ್ಲಿ ವಾರಕ್ಕೆ 8-9 ಪೀರಿಯಡ್‌ಗಳಿದ್ದವು. ಈಗ 5-6 ಪೀರಿಯಡ್‌ಗಳು ಮಾತ್ರ ಇದೆ. ಮೊದಲು ವ್ಯಾಕರಣ ಮಿಡಲ್ ಸ್ಕೂಲಲ್ಲಿ ಚೆನ್ನಾಗಿ ಕಲಿಸಿ ಸರಿಯಾದ ತಳಹದಿ ಇರುತ್ತಿತ್ತು. ಈಗ ಹೊಸ ಪಾಠ ಕ್ರಮದಲ್ಲಿ ವ್ಯಾಕರಣ ತಳಹದಿಯನ್ನು ಕಿತ್ತುಹಾಕಿದ್ದಾರೆ. ಅನೇಕ ಉಪಾಧ್ಯಾಯರಿಗೂ ವ್ಯಾಕರಣದ ಭಾಗಗಳು ಗೊತ್ತಿಲ್ಲ ಎಂದು ಶಿಕ್ಷಣ ಪಂಡಿತರು ಹೇಳುತ್ತಿರುವುದು ಎಲ್ಲರಿಗೂ ಗೊತ್ತು. ಒಂದು ರಜಾ ಚೀಟಿಯನ್ನು ಬರೆದರೆ, ಉಪಾಧ್ಯಾಯರು ಕೆಲವರು, ಹಲವಾರು ತಪ್ಪುಗಳನ್ನು ಮಾಡುತ್ತಾರೆ. ಇವರು ಕಲಿಸುವ ಭಾಷೆಯ ಮಟ್ಟವೇನು ? ಅದರಲ್ಲೂ ಅನಕ್ಷರಸ್ಥ ಕುಟುಂಬಗಳಿಂದ ಬರುತ್ತಿರುವ ಮಕ್ಕಳ ಗತಿಯೇನು ? ರೋಗವೂ ಪ್ರಬಲ, ವೈದ್ಯನ ಅಜ್ಞಾನವೂ ಪ್ರಬಲ !

ಪಠ್ಯಪುಸ್ತಕಗಳ ಗೊಂದಲ ಇನ್ನೊಂದು ವಿಚಿತ್ರ ಮೈಸೂರು ಪ್ರಾಂತ್ಯದ ಬೇರೆ ಬೇರೆ ಭಾಗಗಳಲ್ಲಿ ಬೇರೆ ಬೇರೆ ಪಠ್ಯಪುಸ್ತಕಗಳಿವೆ — ಕೆಲವು ವಿಷಯಗಳಲ್ಲಿ. ಇತ್ತೀಚಿಗೆ ನಮ್ಮೂರಿಗೆ ಮಂಡ್ಯದಿಂದ ಒಬ್ಬರು ಸರ್ಕಾರಿ ಅಧಿಕಾರಿಗಳು ವರ್ಗವಾಗಿ ಬಂದರು ಫೆಬ್ರವರಿ ತಿಂಗಳಲ್ಲಿ. ಅವರ ಇಬ್ಬರು ಮಕ್ಕಳನ್ನು ನಮ್ಮ ಶಾಲೆಗೆ ಸೇರಿಸಿದರು. ಆ ಹುಡುಗರಿಗೆ ಇಂಗ್ಲೀಷ್ ಪಠ್ಯಪುಸ್ತಕಗಳು ಬದಲಾದವು. ಪರೀಕ್ಷೆ ಇನ್ನೊಂದು ತಿಂಗಳಿದೆ. ಮನೆಯ ಪಾಠ ಬೇಕೆ ? ಬೇಡವೆ ?

ಪ್ರತಿ ಶಾಲೆಯಲ್ಲೂ ಬಹುಮಂದಿ ವಿದ್ಯಾರ್ಥಿಗಳಿಗೆ ಪಠ್ಯಪುಸ್ತಕಗಳಿಲ್ಲ ಮನೆಯಲ್ಲಿ ಯಾವ ಶಿಕ್ಷಣ ಸಹಾಯವೂ ಇಲ್ಲ. ಶಾಲೆಗೆ ಸರಿಯಾಗಿ ಬರುವ ಅನುಕೂಲವಾಗಲಿ, ಶಿಸ್ತಾಗಲಿ ಇಲ್ಲ. ಶಾಲೆಯಲ್ಲಿ ಅನೇಕ ಪಾಠಗಳನ್ನು ಚೆನ್ನಾಗಿ ಮಾಡುವ ದಕ್ಷರಾದ ಉಪಾಧ್ಯಾಯರು ವಿರಳ. ಪಾಠಗಳು ಚೆನ್ನಾಗಿ ನಡೆದರೂ ಅರ್ಥವಾಗಲು ಕಷ್ಟ ಅನೇಕರಿಗೆ. ಮೂಢ ನಂಬಿಕೆಯಿಂದ ಇಂಗ್ಲೀಷ್ ಮೀಡಿಯಂ ತೆಗೆದುಕೊಳ್ಳುತ್ತಾರೆ. ಅದು ಸಾಲದು ಎಂದು ವಿಜ್ಞಾನ, ಗಣಿತವೇ ಐಚ್ಛಿಕ ವಿಷಯಗಳನ್ನಾಗಿ ಆರಿಸಿಕೊಳ್ಳುತ್ತಾರೆ ! ಈ ಹಿನ್ನೆಲೆಯಲ್ಲಿ ಕಲಿತ ವಿದ್ಯಾರ್ಥಿಗಳು ಹೊಸ ಹೊಸ ಮಾದರಿಯ ಪ್ರಶ್ನೆ ಪತ್ರಿಕೆಗಳನ್ನು ಎದುರಿಸಿ ಪರೀಕ್ಷೆಗಳನ್ನು ಗೆಲ್ಲಬೇಕು. ನೀರಿನಲ್ಲಿ ಮುಳುಗುತ್ತಿರುವವನು ಪ್ರಾಣ ಉಳಿಸಿಕೊಳ್ಳಲು ಈಜುಬರದೆ ಒದ್ದಾಡುತ್ತಾ ಹುಲ್ಲುಕಡ್ಡಿಯನ್ನೋ ಮತ್ತೇನನ್ನೋ ಹಿಡಿದುಕೊಳ್ಳುವಂತೆ ಮನೆಯ ಪಾಠಗಳನ್ನು, ಕೋಚಿಂಗ್ ಹೋಂಗಳನ್ನೂ ನಂಬುತ್ತಾರೆ. ಅವರ ಪಾಲಿಗೆ ಕಾಣುವ ಪರಿಹಾರ ಅದೊಂದೇ !

ಮನೆಯ ಪಾಠಗಳನ್ನು ಹೇಳುವ ಉಪಾಧ್ಯಾಯರು ತರಗತಿಗಳಲ್ಲಿ ತಮ್ಮ ಪಾಠಗಳನ್ನು ಸರಿಯಾಗಿ ಮಾಡುವುದಿಲ್ಲ ಎಂಬ ಆಕ್ಷೇಪಣೆ ಇದೆ. ಮನೆಯ ಪಾಠಗಳಲ್ಲಿ ಸುಸ್ತಾಗಿ, ಅಥವಾ ಮನೆಯ ಪಾಠಗಳಿಗೆ ಬರಲಿ ಎಂಬ ಧ್ಯೇಯವನ್ನಿಟ್ಟುಕೊಂಡು ಪಾಠಗಳನ್ನು ಮಾಡದಿರುವ ಅಯೋಗ್ಯ ಉಪಾಧ್ಯಾಯರು ಕೆಲವರಿರಬಹುದು. ಅದು ನಡತೆಯ ಪ್ರಶ್ನೆ. ಮತ್ತೆ ಕೆಲವು ಉಪಾಧ್ಯಾಯರು ನಡುರಾತ್ರಿವರೆಗೆ ಇಸ್ಪೀಟ್ ಆಟವಾಡಿ ತರಗತಿಗಳಲ್ಲಿ ತೂಕಡಿಸುವ ಉದಾಹರಣೆಗಳೂ ಇವೆ ! ತರಗತಿಗಳಿಗೆ ಹೋಗಿ ಪಾಠಗಳನ್ನು ಮಾಡದೆ, ತಮ್ಮ ಕವನಗಳನ್ನು ಹಾಡುವವರು, ತಾವು ಬರೆದ ನೋಟ್ಸನ್ನೋ, ಮತ್ಯಾವ ಪುಸ್ತಕವನ್ನೋ ಮಾರಾಟಮಾಡುವ ಪ್ರಚಾರ ಕಾರ್ಯ, ಅದರ ಬಾಕಿ ವಸೂಲಿ ಕಾರ್ಯ ಇವುಗಳಲ್ಲಿ ತೊಡಗಿ ಪಾಠಗಳನ್ನು ಅಲಕ್ಷ್ಯಮಾಡುವ ಉಪಾಧ್ಯಾಯರೂ ಇದ್ದಾರೆ. ತರಗಳಲ್ಲಿ ಪಾಠಗಳನ್ನು ಹೇಳುವ ಬದಲು, ಪಾರ್ಟಿ ಕಟ್ಟುವ ಯೋಚನೆಗಳು, ಜಾತೀಯ ಭಾವನೆಗಳನ್ನು ಹರಡುವ ಭಾಷಣಗಳು, ತಮ್ಮ ಸಹೋದ್ಯೋಗಿಗಳನ್ನೋ, ಮುಖ್ಯೋಪಾಧ್ಯಾಯರನ್ನೋ ತೆಗಳುವ ಭಾಷಣಮಾಡುವ ಉಪಾಧ್ಯಾಯರೂ ಇದ್ದಾರೆ !

ಆದ್ದರಿಂದ ಮನೆಯ ಪಾಠಗಳನ್ನು ಹೇಳುವ

ಉಪಾಧ್ಯಾಯರು ತರಗತಿಗಳಲ್ಲಿ ತಮ್ಮ ಕೆಲಸ ಮಾಡಲಾರರು ಎಂಬ ವಾದಕ್ಕೆ ನಿದರ್ಶನಗಳಿವೆ. ಆದರೆ ಅಂತಹ ಉಪಾಧ್ಯಾಯರು ಮನೆಯ ಪಾಠಗಳನ್ನೂ ಪಡೆಯುವುದಿಲ್ಲ. ಏಕೆಂದರೆ ಅನೇಕ ವಿದ್ಯಾರ್ಥಿಗಳು, ಅವರ ಪೋಷಕರು, ಕಷ್ಟಪಟ್ಟು ಸಂಪಾದಿಸಿದ ಹಣವನ್ನು ತರುವಾಗ ಆದಷ್ಟು ಹೆಚ್ಚು ಪ್ರತಿಫಲ ಪಡೆಯುವ ಆಸೆಪಡುವುದು ಸ್ವಾಭಾವಿಕ. ಅವರು ಅತ್ಯಂತ ದಕ್ಷ ಉಪಾಧ್ಯಾಯರನ್ನೇ ಹುಡುಕುತ್ತಾರೆ. ತರಗತಿಯಲ್ಲಿ ದಕ್ಷತೆಯಿಲ್ಲದ ಉಪಾಧ್ಯಾಯನನ್ನು ಯಾವ ವಿದ್ಯಾರ್ಥಿಯೂ ಗೌರವಿಸುವುದಿಲ್ಲ !

ಈ ಸಾಂಕ್ರಾಮಿಕ ರೋಗಕ್ಕೆ ಪರಿಹಾರವೇನು ? ಮೊದಲನೆಯದಾಗಿ, ಶಾಲೆಗಳಲ್ಲಿ ದಕ್ಷರಾದ ಉಪಾಧ್ಯಾಯರ ಸಂಖ್ಯೆ ಬಹಳ ಹೆಚ್ಚಬೇಕು. ಅಯೋಗ್ಯರು ಹುಡುಕಿದರೂ ಸಿಗದಂತಾಗಬೇಕು. ಪ್ರತಿ ಉಪಾಧ್ಯಾಯನೂ ತನ್ನ ಕೆಲಸವನ್ನು ಶಾಲೆಯಲ್ಲಿ ಶ್ರದ್ಧೆಯಿಂದ ಮಾಡುವಂತೆ ನೋಡಿಕೊಳ್ಳುವುದು ಮುಖ್ಯೋಪಾಧ್ಯಾಯರ ಕರ್ತವ್ಯ. ಶಾಲೆಯಲ್ಲಿ ಉಪಾಧ್ಯಾಯ ತನ್ನ ಕರ್ತವ್ಯವನ್ನು ಸಮರ್ಪಕವಾಗಿ ಮಾಡುವಂತೆ ನೋಡಿಕೊಂಡ ಮೇಲೆ ಉಪಾಧ್ಯಾಯ ತನ್ನ ವಿರಾಮ ವೇಳೆಯಲ್ಲಿ ಏನುಮಾಡುತ್ತಾನೆ ಎಂಬ ವಿಚಾರದಲ್ಲಿ ತಲೆಕೆಡಿಸಿಕೊಳ್ಳುವ ಅವಶ್ಯಕತೆ ಇರಬೇಕಾಗಿಲ್ಲ. ಶಾಲೆಯಲ್ಲಿ ಅವನು ಏನುಮಾಡಿದರೂ ಗಮನಿಸನೆ, ಶಾಲೆಯ ಹೊರಗೆ ಅವನು ಏನುಮಾಡುತ್ತಾನೆ ಎಂಬುದರಲ್ಲಿ
ಕುತೂಹಲ ತೋರಿಸುವುದು ವಿವೇಕವಲ್ಲ. ಅವ
ವಿರಾಮ ಅವನ ಪಾಲಿನದು.

ಪ್ರತಿ ಯೋಗ್ಯ ಉಪಾಧ್ಯಾಯನೂ ತನ್ನ ವಿರಾ
ಕಾಲವನ್ನು ಸುಸಂಸ್ಕೃತನಂತೆ ಕಳೆಯಲು ಇಷ್ಟಪಡ
ತ್ತಾನೆ. ಮನೆಯ ಪಾಠಗಳನ್ನು ಕೆಲವು ವೇಳೆ ಇಷ್
ವಿಲ್ಲದೆಯೇ ಒಪ್ಪಿಕೊಳ್ಳುತ್ತಾನೆ. ಅದಕ್ಕೆ ಎರಡ
ಕಾರಣ ಮೊದಲನೆಯದು ಗಗನಕ್ಕೆ ಏರುತ್ತಿರುವ ಬೆ
ಗಳ ಪರಿಣಾಮ, ಎರಡನೆಯದು ಪೋಷಕರ ಒತ್ತಾಯ

ಮನೆಯ ಪಾಠಗಳನ್ನು ತಡೆಗಟ್ಟಲು ಉಪಾ
ಧ್ಯಾಯರನ್ನು ಆಕ್ಷೇಪಿಸುವ ಮಾರ್ಗ ಪ್ರಯೋಜನವಿಲ್ಲ
ಪ್ರತಿ ಶಾಲೆಯಲ್ಲೂ, ದಕ್ಷರಾದ ಉಪಾಧ್ಯಾಯರನ್
ನೇಮಿಸಬೇಕು. ಶಾಲೆಗೆ ಅವಶ್ಯಕವಾದ ಲ್ಯಾಬರೇಟರಿ
ಲೈಬ್ರರಿ ಮುಂತಾದ ಸೌಕರ್ಯಗಳನ್ನು ಒದಗಿಸಬೇಕು
ಕಲಿಯಲು ಕಷ್ಟಪಡುವ ವಿದ್ಯಾರ್ಥಿಗಳಿಗೆ ಶಾಲೆಯಲ್ಲಿ
ಒಂದು "ಕೋಚಿಂಗ್ ಹೋಂ" ಇರಬೇಕು. ಅವರಿ
"ಪಠ್ಯಪುಸ್ತಕಗಳ ಬ್ಯಾಂಕ್ ಇರಬೇಕು. ಉಪಾಧ್
ಯರಿಗೆ ಎರಡು ಹೊತ್ತು ಹೊಟ್ಟೆ ತುಂಬಾ ಆಹಾ
ಸಿಗಲು ಬೇಕಾದ, ನ್ಯಾಯವಾಗಿ ಸಲ್ಲಬೇಕಾದ ಸೌಕರ್
ಗಳನ್ನು ಒದಗಿಸಬೇಕು. ಇವು ಈ ಮನೆಯ ಪಾಠ
ರೋಗ ತಡೆಗಟ್ಟಲು ಅನುಸರಿಸಬೇಕಾದ ಪರಿಹಾ
ಮಾರ್ಗಗಳಲ್ಲಿ ಕೆಲವು. ಇನ್ನೂ ಉತ್ತಮ ಮಾರ್ಗ
ಪ್ರತಿ ಶಾಲೆಯೂ ಗುರುಕುಲದಂತೆ-ವಿದ್ಯಾರ್ಥಿಗಳ
ಉಪಾಧ್ಯಾಯರ ಸಹಜೀವನಕ್ಕೆ ಸಕಲ ಅನುಕೂ
ಗಳನ್ನೂ ಮಾಡಿಕೊಟ್ಟು "ರೆಸಿಡೆನ್ಷಿಯಲ್" ಸ್ಕೂಲ
ಆಗಬೇಕು.



# ರಾಗ ಬಂಧನ ಮುಕ್ತಿ

ಲೇಖಕ : **ಅಚಲಶರಣ್**

**ರಾಗಬಂಧನ :**

ವಿದ್ವೇಷ ಕ್ರೌರ್ಯಕಬ್ಬಂಡೆ – ರೊಚ್ಚಿಗೆಬ್ಬಿಸಿದ ಗೊಂಡಾರಣ್ಯ
ಕುಣಿಯುತಿದೆ ಅಗ್ನಿಧಾಮ
ನುಡಿಯುತಿದೆ ಬೆಂಕಿಗೂಡು
'ನುಚ್ಚುನೂರು, ಬೂದಿಬೀಡು'
ಕಲ್ಮಷದ ಕಿಲುಬು, ವಿಷಕಾಳಿಂಗದುಸಿರು – ಕಾಳಸಂತೆಯ ನಾಣ್ಯ
ಅಯ್ಯೊ ! ಅಮ್ಮಾ ! ಕಿರ್ರೋ, ಮರ್ರೋ –
ನರಕ ಮಂಥನದಲ್ಲಿ ಮೃತ್ಯು ಕೇಕೆ
ನರಳು ಜೀವನದ ಗೊಗ್ಗರು – ಮರಣದುಸಿರು

ಸಾತ್ವಿಕತೆಯ ಸಿಂಹಾಸನದಿ ತಾಮಸಕೆ ಆಹ್ವಾನ !
'ಅಹಂ' ಇಟ್ಟ ಸ್ವಾಗತ ಭಾಷಣ
ತುಂಬಿದ್ದ ಸಾಗರದಿ ಕೆಳಗೆ ತಂಗಿದ್ದ
ಬಗ್ಗಡದ ಪದರ ಹೆರಡು – ಹುಡುಡು
ಶ್ವೇತಕರಡಿಯ ಚಿಂತೆ ಬದಿಗಿರಲಿ – ದೇಹಭಕ್ತಿಗಿಂತಲು ಮಿಗಿಲೇನದು ?
ಹಿಮಗಿರಿಯ ತೊಟ್ಟಿಲಲಿ, ಚಳಿಯ ಹಡಗಿನಲಿ
ಯಾರಾದರಳುತಿರಲಿ, ನಮಗೇಕದು ? – ಬಿಳಿಯ ಹೂವೂಳು
ಚೂರಿ ಇರಿಯುವ ಕೇಳಿಯುಳಿದು !

ಅಯ್ಯೋ ! ಸತ್ತುಹೋದನೆ ಅಭಿಮಾನ ಕೌರವ !
ಉಳಿದು ಅಹಂಕಾರ ಸ್ವಾರ್ಥ ಸೈಂಧವ !
ಹೃದಯ ಜೋಲಿಯ ತಂತಿ ಕಡಿದುಬಿತ್ತು ಪಾತಾಳ !
ಎಷ್ಟು ಕಾಲಕೆ, ಯಾರು ಬರುವರು ?
ಯಕ್ಷ ಪ್ರಶ್ನೆಯು ವ್ಯಾಸಕ
"ಯದಾ ಯದಾಹಿ..............."
–ಅಲ್ಲ ದೀನದೇಹಿ ಭಾವುಕ !
ಬೂದಿ ಮುಚ್ಚಿದ ಕೆಂಡ ಗಾಳಿ ಇಲ್ಲದೆ ಮತ್ತೆ ಬೂದಿಯಾಗಿತ್ತೇ ?
ನೂರು ಹರಿದಾರಿಯ ದೂರ ಓಡಿದ ಜಿಂಕೆ ನಿಂತುಬಿಟ್ಟಿತು ಏಕೆ ?
ಪಾಪ ಸ್ನಾಯು ಎಳೆದಿರಬೇಕೆ ?

**ಮನಬಾನುಲಿ :**

ಸತ್ಯ ಸ್ನಾತಕ ಪ್ರೇಮಭಾಷಿಯು ನುಡಿಯಿತು :
"ಹೃದಯ ದೇವನ 'ಅಕ್ಷರ' ಪರಸಿ
ಎಲ್ಲ:ನೋಡಿಹೆಯ ಅರಸಿ, ಅರಸಿ ?"
"...............ನೀ..................."
ಎದೆದೆರದು ಶುಭವ, ಶುಭ್ರತೆಯ ಮಂಗಳವನಾರಾಧಿಸು
ಎದೆಯೊಡ್ಡಿ ಶೌರ್ಯದಲಿ ವಿಜೃಂಭಿಸು !

 

# ಸುಕ್ಷೇತ್ರ-ಸಂದರ್ಶನ



ಜ್ಞಾನಾನ್ನದಾಸೋಹಗಳಿಗೆ ನಿಧಿ ಎಂದು ಶ್ರೀ ಸಿದ್ಧಗಂಗಾ ಕ್ಷೇತ್ರವು ಪುಣ್ಯಕ್ಷೇತ್ರವಾಗಿ ದಕ್ಷಿಣ ಭಾರತದಲ್ಲಿ ಸುಪ್ರಸಿದ್ಧವಾಗಿದೆ, ನಾವು ತುಮಕೂರಿಗೆ ಬರುತ್ತಿದ್ದಂತೆಯೇ ಸಿಗುವ ಶ್ರೀ ಸಿದ್ಧಗಂಗಾ ಕ್ಷೇತ್ರ ದರ್ಶನ ಹಾಗೂ ಸದ್ಗುರು ಶ್ರೀ ಶಿವಕುಮಾರಸ್ವಾಮಿಜಿಯವರ ಸಂದರ್ಶನ ಮಾಡಿದಾಗ ಬೇರೊಂದು ಲೋಕದಲ್ಲಿದ್ದೇವೆಂಬ ಭಾವನೆಯುಂಟಾಗಿ,

"ಕೋಟಿನದುಲು ಧನುಷ್ಕೋಟಿಲೋನುಂಡಗ
ಏಟಿಕಿ ತಿರಿಗೆದವೇ ಓ ಮನಸಾ"

ಎಂಬ ನಾದಬ್ರಹ್ಮರೆನಿಸಿದ ತ್ಯಾಗರಾಜರ ಕೃತಿಯೊಂದು ನೆನಪಿಗೆ ಬಂದು ನನಗರಿವಿಲ್ಲದಂತೆಯೇ ನನ್ನ ಅಂತರಾತ್ಮದಲ್ಲಿ ನುಡಿಯುತ್ತಿದ್ದಿತು. ಶ್ರೀ ಸಿದ್ಧಗಂಗೆ ಜ್ಞಾನಗಂಗೆಗಳ ಸಂಗಮಕ್ಷೇತ್ರವೇ ಶ್ರೀ ಸಿದ್ಧಗಂಗಾ ಕ್ಷೇತ್ರ. ಇದುವೇ ಪುಣ್ಯಪೀಯೂಷಸ್ತನ್ಯವಾಹಿನಿಯಾಗಿ, ಜ್ಞಾನಧರ್ಮಹಿತ ಕಾವ್ಯಕಾರಿಣಿಯಾಗಿ ಜನತೆಯ ಜಡತ್ವವನ್ನು ದೂರಮಾಡಿ ಲಕ್ಷಗಟ್ಟಲೆ ಲೆಕ್ಕವಿಲ್ಲದಷ್ಟು ಮಕ್ಕಳಿಗೆ ಜ್ಞಾನೋಪಾಸಕರಿಗೆ ಜ್ಞಾನಪೀಯೂಷೆಯನ್ನುಣಬಡಿಸಿ ಪತಿತರನ್ನು ಪಾವನಗೊಳಿಸುತ್ತಿದೆ ಈ ಸುಕ್ಷೇತ್ರ.

ಅನೇಕ ಪುಣ್ಯಕ್ಷೇತ್ರಗಳಲ್ಲಿ ನಾವು ಕಾಣುವುದು ನಿರ್ಜೀವಮೂರ್ತಿಗಳಾದ ಹರಿಹರೇಶ್ವರನ್ನಲ್ಲವೇ? ಅಲ್ಲಿ ಭಾವುಕರು ಭಕ್ತರು ತನ್ಮಯರಾದರೆ ಇಲ್ಲಿ ಅಂದರೆ ಶ್ರೀ ಸಿದ್ಧಗಂಗಾಕ್ಷೇತ್ರದಲ್ಲಿ ಸಜೀವ ಪರಬ್ರಹ್ಮಪಾವನಮೂರ್ತಿ ಪ್ರಣವಸ್ವರೂಪಿ ಪರಮಪೂಜ್ಯ ಶ್ರೀ ಶ್ರೀ ಶಿವಕುಮಾರಸ್ವಾಮಿಜಿಯವರನ್ನು ಕಂಡು ತಲ್ಲೀನರಾಗುತ್ತೇವೆ. ಈ ಕ್ಷೇತ್ರಮಹಿಮೆ "ಕೊರಡು ಕೊನರುವುದಯ್ಯ ಬರಡು ಹಯನಹುದಯ್ಯ" ಎಂಬ ಮಾತಿಗೆ ಲಕ್ಷ್ಯವಾಗಿದೆ ಎನ್ನಬೇಕು. ಶ್ರೀಗಳವರ ಸಂದರ್ಶನ ಪಡೆದ ಸಂಭಾಷಣೆ ಮಾಡಿದವರ ಮನ ಶುದ್ಧಿಗೊಂಡು ಅನಂತಸದ್ಭಾವನೆಗಳು ಒಡಮೂಡುತ್ತವೆ.

ಶ್ರೀ ಶ್ರೀಗಳವರನ್ನು ಕಾಣುವಾಗ ಒಂದು ಕ್ಷಣ ಯುಗಪುರುಷ ವಿವೇಕಾನಂದರಂತೆಯೂ ಮತ್ತೊಂದು ಕ್ಷಣ ದೇವಪುರುಷರಂತೆಯೂ ಕಂಡರೆ ಮರುಕ್ಷಣ ಭಕ್ತಿಭಂಡಾರಿ ಬಸವಣ್ಣನವರಂತೆಯೂ ಭವರೋಗಹರ ಶಂಕರನಂತೆಯೂ ಅಷ್ಟೇ ಏಕೆ? ಮಹಾಮಹಿಮಾನ್ವಿತ ವ್ಯಕ್ತಿಗಳೆಲ್ಲರ ಅಂಶಭೂತರಾಗಿ ಆದರ್ಶ ವ್ಯಕ್ತಿಗಳಂತೆ ಕಂಡು ತಣಿಯುವುದೆಮ್ಮ ಮನ. ಇನ್ನು ಉಪದೇಶ ಬೋಧಕರಾಗಿ ವೇದಿಕೆಯ ಮೇಲೆ ನಿಂತಾಗ ಗಂಟೆಗಳು ನಿಮಿಷಗಳಾಗಿ ಸಭೆಯಲ್ಲಿ ನಿಶ್ಚಲತೆ ನೀರವತೆ ತಲ್ಲೀನತೆ ಮೂಡುತ್ತದೆ. ಆಗಿನ ವಾತಾವರಣ ನಮ್ಮನ್ನು ಕಲ್ಪನಾ ಲೋಕಕ್ಕೊಯ್ದು ಆಚಾರ್ಯ ವಿವೇಕಾನಂದರ ಸಿಂಹವಾಣಿಯನ್ನು ಕೇಳುತ್ತಿದ್ದೇವೆಯೋ ಎನ್ನುವಂತಾಗುತ್ತದೆ.

ಶ್ರೀ ಶ್ರೀಗಳವರು ಕ್ಷೇತ್ರದ ವಿಶೇಷ ಕಾರ್ಯ ಸಂದರ್ಭಗಳಲ್ಲಿ ಅಂದರೆ ಜಾತ್ರೆ ಮೊದಲಾದ ಉತ್ಸವಗಳ ಸಂದರ್ಭಗಳಲ್ಲಿ ಮೇಲ್ವಿಚಾರಕರಾಗಿ ವೀಕ್ಷಿಸುತ್ತಿರುವಾಗಲೂ ಹಾಗೂ ಅನ್ನದಾಸೋಹದವೇದಿಗಳಲ್ಲಿರುವಾಗ ನೋಡಿದರೆ ಬಡವರ ಬಂಧು ವಿಶ್ವಸಂಸಾರಿ ಜಗದೀಶ್ವರನಂತೆಯೇ ಕಾಣುವೆವು. ಆ ಸಂದರ್ಭದಲ್ಲಿ ದಾನವರೇಣ್ಯರ "ಅಲ್ಲಿ ರಾಮ ಇಲ್ಲಿ ರಾಮ ಎಲ್ಲಿ ನೋಡಿದರಲ್ಲಲ್ಲಿ ರಾಮ" ಎಂಬ ಕೃತಿ ನೆನಪಿಗೆ ಬಂದು ಹಾಗೆಯೇ "ಅಲ್ಲಿಯೂ ಸ್ವಾಮೀಜಿ ಇಲ್ಲಿಯೂ ಸ್ವಾಮೀಜಿ ಎಲ್ಲಿ ನೋಡಿದರಲ್ಲಲ್ಲಿ ಸ್ವಾಮೀಜಿ" ಎಂಬ ನುಡಿ ಅನ್ವಯಿಸುತ್ತದೆ. ಹಾಗೆಯೇ ಮತ್ತೊಂದು ಕೃತಿ, "ನಿನ್ನೊಳಗಾಲಯವೊ ಆಲಯವು ನಿನ್ನೊಳಗೊ" ಎಂಬುದು ನೆನಪಿಗೆ ಬಂದು "ನಿನ್ನೊಳಗೆ ಕ್ಷೇತ್ರವೋ ಕ್ಷೇತ್ರವು ನಿನ್ನೊಳಗೊ" ಎಂಬಂತೆ ಕ್ಷೇತ್ರವನ್ನೂ ಶ್ರೀಗಳವರನ್ನೂ ಕಾಣುತ್ತೇವೆ.

ಇಂತಹ ಮಹಾಗುರುವಿನ ದರ್ಶನ ಪಡೆಯುವ ಕ್ಷೇತ್ರವನ್ನು ಸಂದರ್ಶಿಸುವ ಯೋಗ ಸುಯೋಗ ಸುಕೃತಗಳಿಗೆಣೆಯುಂಟೆ? ಇದು ನಮಗೊದಗಿದ ಗುರು ಕಾರುಣ್ಯದ ಮರೆಯದ ಸಂದರ್ಭ.

**ಶ್ರೀಮತಿ ಗೌರಮ್ಮ ವೀರಭದ್ರಯ್ಯ**
ತುಮಕೂರು

# ಎಪ್ಪತ್ತು ತುಂಬಿದಾ 'ದತ್ತ ಬೇಂದ್ರೆ'ಗೆ



ಕನ್ನಡದ ಕಾವ್ಯಗಂಗೆ
ಶ್ರೀಮಂತ ಭಾವಗಂಗೆ
ತುಂಗ ಭಾವದಿ ಬಲಿತು
ತಂದು ಕೊಟ್ಟಿತು ನಮಗೆ-ದತ್ತ ಬೇಂದ್ರೆಯನು

'ಸರಸ ಜನನವು' ಎಂದು
'ವಿರಸ ಮರಣ' ವು ಎಂದು
'ಸಮರಸವೆ ಜೀವನ' ವು ಎಂದ ಬೇಂದ್ರೆಯನು

ಕಣ್ಣೀರೆ ಬದುಕಾಗೆ
ಕಾವ್ಯ ಶ್ರೀ ತಪವಾಗೆ
ಉದ್ಬುದ್ಧ ಕಂಠದಿಂ
ಉದ್ಭವಿಸಿ ಬಂದಿತ್ತೈ—"ಗಂಗಾವತರಣ"

ನರ ನರವು ಮಿಡಿ ಮಿಡಿದು
ಕಣ ಕಣವು ಕುಣಿ ಕುಣಿದು
ಹಿಗ್ಗೆ ಜೀವನವಾಗೆ
ಹೃದಯ ಸ್ಪಂದನದಿಂದ
ಮೂಡಿತ್ತೈ ಕುಣಿ ಕುಣಿದು-"ಕುಣಿಯೋಣು ಬಾರs"

ಪರರ ಬಂಧನದಿಂದ
ಬಸವಳಿದು ಬಿಸುಸುಯ್ದು
ಆಕ್ರಂದನವ ಗೈಯುತಿರೆ
ಭಾರತದ ಭವಿತವ್ಯ ಭವ್ಯ ಜನನಿ
ಸಿಡಿಲವಾಣಿಯ ತೆರದಿ
ಗುಡುಗಿದ್ದೈ ನೀನಂದು-"ಮೂವತ್ತುಮೂರು ಕೋಟಿ"

ಬೆಳಸುತಿಹೆ ನಿನ್ನಯಾ
ಕನ್ನಡದ ಕಂದಗಳ
ಉಣಿಸು ಅಮೃತಸರದ
ತನಿವಾಲ ಕಬ್ಬಗಳ

ಎಪ್ಪತ್ತು ತುಂಬಿದಾ ಓ ದತ್ತ ಬೇಂದ್ರೆ
ಸತ್ಯ ಸೌಂದರ್ಯಗಳ ಸಾಕ್ಷ್ಯವಿತ್ತೆ
ಭಾವ ಹೈಮಾಚಲದ ಶಿಖರವಾದೆ.

—ಡಿ. ಎಸ್. ಚಂದ್ರಶೇಖರಯ್ಯ.

# ಸಂಸ್ಕೃತ ಮತ್ತು ತ್ರಿಭಾಷಾ ಸೂತ್ರ

**ಡಾ॥ ಸಂಪೂರ್ಣಾನಂದ್**

ರಾಜಾಸ್ಥಾನ್ ರಾಜ್ಯಪಾಲರು

ತ್ರಿಭಾಷಾ ಸೂತ್ರವನ್ನು ರೂಪಿಸಿದವರು ವಿಚಾರಶೀಲರೆಲ್ಲರ ಪ್ರಶಂಸೆಗೆ ತಕ್ಕವರಾಗುತ್ತಾರೆ. ಭಾಷಾ ಸಮಸ್ಯೆಯು ಭಾರತದ ಐಕ್ಯತೆಯನ್ನೇ ಬೆದರಿಸುತ್ತ ದೇಶದ ಮುನ್ನಡೆಯನ್ನು ಶತಮಾನಗಳವರೆಗಲ್ಲದಿದ್ದರೂ ಕೆಲ ದಶಕಗಳವರೆಗಾದರೂ ತಡೆಹಿಡಿಯಬಲ್ಲದಾಗಿದೆ. ಇದನ್ನು ಧೈರ್ಯವಾಗಿ .ತ್ರಿಭಾಷಾ ಸೂತ್ರಕಾರರು ಎದುರಿಸಲು ಪ್ರಯತ್ನಿಸಿದ್ದಾರೆ. ನಮ್ಮ ವಿವಿಧ ಜನಕೋಟಿಯ ಧಾರ್ಮಿಕ, ಬುಡಕಟ್ಟಿನ, ಭಾಷಾ ವೈವಿಧ್ಯತೆಗಳೆಲ್ಲವೂ ಒಟ್ಟಾಗಿ ಬೆಸೆದ ಗಡುಸಾದ ಭಾವೈಕ್ಯತೆಯನ್ನು ನಾವೆಲ್ಲರೂ ಬಯಸುತ್ತೇವೆ. ಇಂತಹ ಔಷಧಿಯೊಂದನ್ನು ವೈವಿಧ್ಯತೆಯ ರೋಗಕ್ಕೆ ಕಂಡುಹಿಡಿವ ಬುದ್ಧಿವಂತನನ್ನು ಹೊಗಳಲು ನಾವು ಬಯಸುವುದೂ ಉಂಟು. ಕೆಲವು ವರ್ಷಗಳ ಹಿಂದೆಯೇ ಈ ಸೂತ್ರವನ್ನು ರೂಪಿಸಲಾಯಿತಾದರೂ ಇನ್ನೂ ಅದಕ್ಕೆ ಉಚಿತವಾದ ಪರಿಕ್ಷಾ ಪ್ರಯೋಗ ಕೊಡಲು ಸಾಧ್ಯವಾಗಿಲ್ಲವಲ್ಲದೆ ಹಿಂದಿನಂತೆ ತೀಕ್ಷ್ಣವಾದ ಅಂತಹ ಆವಶ್ಯಕತೆಯೂ ಈವರೆಗೆ ಉಂಟಾಗಿರಲಿಲ್ಲ. ಈ ಸೂತ್ರವನ್ನು ಒರೆಹಚ್ಚಲು ಸಾಕಷ್ಟು ಕಾಲಾವಕಾಶವಿದ್ದಿತಾದರೂ ಅಂತಹ ಪ್ರಯತ್ನಮಾಡದೆ ಪೂರ್ವ ಪರಿಕ್ಷೆಯೇ ಇಲ್ಲದೆ ಕಾಂಗ್ರೆಸ್ ಕಾರ್ಯಕಾರೀ ಸಮಿತಿಯು ಇದನ್ನೇ ಮೂಲಭೂತವಾದ ಸೂತ್ರವೆಂದು ಪರಿಗ್ರಹಿಸಿಬಿಟ್ಟಿದೆ. ಪ್ರಾಂತ್ಯಗಳ ಮುಖ್ಯಮಂತ್ರಿಗಳೆಲ್ಲ ತಮ್ಮ ಮುದ್ರೆಗಳನ್ನೊತ್ತಿಬಿಟ್ಟಿರುವುದರಿಂದಂತೂ ಇನ್ನು ಇದನ್ನು ಜಾರಿಗೆ ತರಲು ಯಾವ ಅವಕಾಶವನ್ನೂ ಕ್ರಮವನ್ನೂ ಬಿಡದೆ ಆದಷ್ಟು ಜಾಗ್ರತೆಯಾಗಿ ಅನುಷ್ಠಾನಕ್ಕೆ ತರುವ ಕೆಲಸ ನಡೆದೇ ತೀರುತ್ತದೆ.

ಮುಂದುವರಿಯುವ ಮೊದಲು, ತೋರಿಕೆಗೆ ಅನವಶ್ಯಕವೆಂದೂ, ಅಧಿಕಪ್ರಸಂಗವೆಂದೂ ಕಾಣಬಹುದಾದ ನಂಬಿಕೆಯೊಂದನ್ನು ಬಹಿರಂಗವಾಗಿ ಒಪ್ಪಿಕೊಳ್ಳಲು ಬಯಸುತ್ತೇನೆ. ಪ್ರತಿಯೊಂದು ಸ್ವತಂತ್ರ ದೇಶವೂ ಒಂದು ರಾಷ್ಟ್ರಭಾಷೆಯನ್ನೂ, ಒಂದು ಆಡಳಿತ ಭಾಷೆಯನ್ನು ಸಾಧ್ಯವಾದರೆ ಹೊಂದಿರಬೇಕೆನಿಸುತ್ತಿದೆ. ಈ ರಾಷ್ಟ್ರಭಾಷೆಯು ಅಂತರ ಪ್ರಾಂತೀಯ ಸಂಪರ್ಕ ಭಾಷೆಯಾಗಿರುವುದಲ್ಲದೆ ಒಂದೊಂದು ಪ್ರಾಂತ್ಯದ ವಿವಿಧ ಭಾಷಾ ವಿಭಾಗಗಳನ್ನು ಒಟ್ಟುಗೂಡಿಸಲು ಉಪಯೋಗವಾಗುತ್ತದೆ. ಇದಕ್ಕಿಂತ ಮಿಗಿಲಾಗಿ ಪ್ರಾಂತ್ಯ ಭಾಷೆಯ ಕೆಲಸ ಬೆಳಯದು ಯಾವ ಆತ್ಮಗೌರವವುಳ್ಳ ಪ್ರಾಂತ್ಯವೂ ತನ್ನ ಆಡಳಿತಕ್ಕಾಗಿ, ಬೇರೊಂದು ಭಾಷೆಯು ಎಷ್ಟೇ ಬಹುಜನರಿಂದ ಮಾತನಾಡುವುದಾಗಿದ್ದರೂ, ಬಳಸಿಕೊಳ್ಳಲು ಇಷ್ಟಪಡದು. ಪ್ರಪಂಚದಲ್ಲೆಲ್ಲಾ ಇಂಗ್ಲಿಷ್ ಭಾಷೆಯಷ್ಟು ಹೆಚ್ಚಾಗಿ ಜನರಿಗೆ ರಷಿಯನ್ ಭಾಷೆಯಾಗಲೀ, ಜರ್ಮನ್ ಭಾಷೆಯಾಗಲೀ ತಿಳಿಯುವುದಿಲ್ಲ; ಆದರೆ ಯಾವ ಸ್ವಾಭಿಮಾನೀ ರಷಿಯನ್ನನೂ, ಜರ್ಮನನೂ ತನ್ನ ಭಾಷೆಯ ಹೊರತಾಗಿ ಬೇರೊಂದನ್ನು ಬಳಸಲು ಒಪ್ಪುವುದಿಲ್ಲ. ಯು. ಎಸ್. ಎಸ್. ಆರ್. ನಲ್ಲಿ ಅನೇಕ ಭಾಷೆಗಳ ಮಧ್ಯೆ ರಷಿಯನ್ ಸಹ ಎಲ್ಲೆಡೆಯೂ ಅರ್ಥವಾಗುವ ಹಾಗೂ ಮಾತನಾಡಲಾಗುವ ಭಾಷೆಯೊಂದು ಮರೆಯಬಾರದು. ಭಾರತದಲ್ಲಿ ನನ್ನ ಕಣ್ಣಿಗೆ ಕಾಣುವಷ್ಟು ದೂರದಲ್ಲಿ ಸಂಸ್ಕೃತವನ್ನು ಬಿಟ್ಟರೆ ಹಿಂದಿಯೊಂದೇ ಈ ಉದ್ದೇಶವನ್ನು ಪೂರ್ಣಗೊಳಿಸಬಲ್ಲ ಭಾಷೆ.

ನಮ್ಮ ಪ್ರಧಾನ ವಿಚಾರಕ್ಕೆ ಹಿಂದಿರುಗುವುದಾದರೆ, ತ್ರಿಭಾಷಾ ಸೂತ್ರದ ಉತ್ಕಟ ಅಭಿಮಾನಿಯಾಗಿ ಪ್ರಾರಂಭಿಸಿದ ನಾನು, ದಿನಕಳೆದಂತೆ ನನ್ನ ಮನಸ್ಸನ್ನು ಬದಲಾಯಿಸಿದ್ದೇನೆ. ಭಾಷೆಯೊಂದು ಎಷ್ಟೇ ಉತ್ತಮವಾದ ಸಂಘಟನಾ ಶಕ್ತಿಪಡೆದಿದ್ದರೂ ನಮ್ಮನ್ನೆದುರಿಸುವ ಸಮಸ್ಯೆಗೆ ಪರಿಹಾರವಾಗದು. ಅದು ಪ್ರಭಾವೀ ಕಾರ್ಯ ಮಾಡಬೇಕಾದಲ್ಲಿ ಜನಜೀವನದೊಡನೆ ನಿಕಟ ಸಂಬಂಧ ಪಡೆದಿರಬೇಕು. ಕೆಲವು ಶತಮಾನಗಳ ಪರ್ಯಂತವಾಗಿ ಪರ್ಷಿಯನ್ ಭಾಷೆಯು ಭಾರತೀಯರ ಆಡಳಿತ ಭಾಷೆಯಾಗಿತ್ತು. ಆದರೆ ಅದು ಯಾವ ಐಕ್ಯತೆಯನ್ನು ಯಾರೊಡನೆ ಸಂಘಟಿಸಲು ಶಕ್ತವಾಯಿತು? ನನಗೆ ತಿಳಿದ ಮಟ್ಟಿಗೆ ಅದು ಜನಜೀವನದ ಮೇಲೆ ಹೆಚ್ಚಿನ ಪ್ರಭಾವ ಬೀರಲು ಶಕ್ತವಾಗಲಿಲ್ಲ. ಕೇವಲ ಆಡುನುಡಿಗಳಿಗೆ ಒಂದೆರಡು ಅರಾಬಿಕ್, ಪರ್ಷಿಯನ್ ಮೂಲದ ಪದಗಳು ಸೇರಿಕೊಳ್ಳುವಂತೆ ಮಾಡಿರಬಹುದಷ್ಟೆ. ಇನ್ನೂ ಆಧುನಿಕ ಉದಾಹರಣೆ ತೆಗೆದುಕೊಳ್ಳುವುದಾದರೆ ಸಂಯುಕ್ತ ಸಂಸ್ಥಾನಗಳ ನೀಗ್ರೋ ಜನರು ಹತ್ತು ಪೀಳಿಗೆಗಳ ಕಾಲದಿಂದಲೂ ಇಂಗ್ಲೀಷ್ ಭಾಷೆಯ ಹೊರತಾಗಿ ಅನ್ಯ ಭಾಷೆಯನ್ನರಿಯರು. ಆದರೆ ಭಾಷೈಕ್ಯತೆಯ ದೃಷ್ಟಿಯಿಂದ ನೋಡಿದರೆ ಈ ಸರ್ವ ಸಾಮಾನ್ಯವಾದ ಏಕಭಾಷೆಯ ಪ್ರಭಾವ ಸೊನ್ನೆಯೆಂದೇ ಹೇಳಬೇಕು. ಅಮೆರಿಕದ ನೀಗ್ರೋ ಮತ್ತು ಅಮೆರಿಕದ ಬಿಳಿಯರು ಭಾವಾತ್ಮಕವಾಗಿ ಸಂಪೂರ್ಣ ಬೇರೆಯಾದ ಎರಡು ಪ್ರಪಂಚಗಳಲ್ಲಿ ವಾಸಿಸುತ್ತಾರೆ. ಅವರಲ್ಲಿ ಯಾರೊಬ್ಬರೂ ಮತ್ತೊಂದು ಗುಂಪಿನವನನ್ನು ತನ್ನ ನೆರೆಯವನಾಗಿ ಮಾಡಿಕೊಳ್ಳಲು ಇಷ್ಟಪಡುವುದಿಲ್ಲ. ಹಿಂದೀ ಭಾಷೆಯಾಡುವ ಉತ್ತರದ ಬಹುಜನರು ಒಂದಲ್ಲ ಒಂದು ದಕ್ಷಿಣದ ಭಾಷೆಯನ್ನು ಕಲಿಯುವುದಾಗಲೀ ಅಥವಾ ಗುಜರಾತಿ, ಮರಾಠಿ, ಬಂಗಾಲಿಯಲ್ಲೊಂದನ್ನಾಗಲೀ ಕಲಿಯುವುದು ಒಂದು ಶ್ರೇಷ್ಠ ಮಾರ್ಗವಾಗುತ್ತದೆ. ದಕ್ಷಿಣದವರು ಹಾಗೆಯೇ ಹಿಂದೀ ಕಲಿಯುವುದೂ ತತ್ಸಮಾನವಾದ ಉತ್ತಮ ಕೆಲಸವೇ ಆಗಿದೆ. ಆದರೆ ಅಂತಹ ಉತ್ತಮ ಫಲಿತಾಂಶಗಳೂ ಸಹ ಭಾರತೀಯ ಭಾಷೈಕ್ಯತಾ ಸಮಸ್ಯೆಯನ್ನು ಇಂದಿನಂತೆಯೇ ಅಪರಿಹಾರ್ಯವಾಗಿಡುತ್ತದೆಂಬ ಭಯವೂ ನನಗಿದೆ ಮತ್ತು ಈ ಮಧ್ಯೆ ಅತ್ಯಮೂಲ್ಯವಾದುದೊಂದನ್ನು ನಾವು ಕಳೆದುಕೊಂಡಿರುವುದಲ್ಲದೆ ನಮ್ಮ ದೇಶಕ್ಕೆ ಅಪಾರ ಹಾನಿಯುಂಟುಮಾಡಿರುತ್ತೇವೆ. ಈ ದಿನಗಳಲ್ಲೇನೋ ಬಹುಮಂದಿ ವಿದ್ಯಾರ್ಥಿಗಳು ಶಾಲಾ, ಕಾಲೇಜುಗಳಲ್ಲಿ ಸಂಸ್ಕೃತವನ್ನು ಅಭ್ಯಾಸಕ್ಕೆ ತೆಗೆದುಕೊಳ್ಳುತ್ತಾರೆ. ಇನ್ನು ಇದು ಅಪರೂಪವಾದ ಸಂಗತಿಯಾಗುತ್ತದೆ. ಪ್ರತಿಯೊಬ್ಬ ವಿದ್ಯಾರ್ಥಿಯೂ ಮೂರು ಭಾಷೆಗಳನ್ನು ಕಡ್ಡಾಯವಾಗಿ ಕಲಿಯಬೇಕಾಗಿರುವಾಗ ನಾಲ್ಕನೆಯದೊಂದು – ಅದೇ ಸಂಸ್ಕೃತ – ಭಾಷೆಯನ್ನು ಅವನ ಮೇಲೆ ಹೇರುವುದು ತೀರ ಅನ್ಯಾಯದ ಕೆಲಸ. ಅಭ್ಯಾಸ ಪತ್ರಿಕೆಯಲ್ಲಿ ಭಾಷೆಗಳ ಅಧ್ಯಯನಕ್ಕೆ ಸ್ಥಾನಕೊಡುವುದಕ್ಕೆ ಒಂದು ಮಿತಿಯಿದೆ. ಅಭ್ಯಾಸ ಮಾಡಲು ಹೇರಳವಾದ ವಿಷಯಗಳಿವೆ. ಇನ್ನೊಂದು ಪೀಳಿಗೆಯ ಬಾಲಕರು ಶಾಲೆಗೆಬರುವ ಕಾಲದವರೆಗೆ ಸಂಸ್ಕೃತ ತರಗತಿಗಳಲ್ಲಿ ಒಬ್ಬರೂ ಇರದ ಪರಿಸ್ಥಿತಿ ಉಂಟಾಗಿರುತ್ತದೆ. ಬಾಲಕ, ಬಾಲಕಿಯರು ತಮ್ಮ ತಮ್ಮ ಪ್ರಾಂತ್ಯ ಭಾಷೆಗಳಲ್ಲಿ ಬಳಕೆಯಲ್ಲಿರುವ, ತಮ್ಮ ವ್ಯಕ್ತಿತ್ವ ಕಳೆದುಕೊಂಡಿರುವ ಸಂಸ್ಕೃತ ಭಾಷೆಯ ಪದಗಳಲ್ಲದೆ ಬೇರೆ ಸಂಸ್ಕೃತ ಪದಗಳನ್ನು ಕೇಳದವರಾಗಿ ಹೋಗಿರುತ್ತಾರೆ. ಈ ವಿಷಯ ಇಲ್ಲಿಗೇ ನಿಲ್ಲುವುದಿಲ್ಲ. ಈಗಲೂ ಅಲ್ಲಲ್ಲಿ ಸಾಮಾಜಿಕ ಧಾರ್ಮಿಕ ವಿಧಿಗಳನ್ನು ಪ್ರಾಂತ್ಯ ಭಾಷೆಯಲ್ಲೇ ನಡೆಸಬೇಕೆಂಬ ಆಗ್ರಹ ಪೂರ್ವಕ ಬೇಡಿಕೆಗಳಿವೆ. ಸ್ವರ್ಗೀಯ ಪುರುಷೋತ್ತಮದಾಸ ಟಂಡನ್ನರು ಹಿಂದೀ ಭಾಷೆಯ ಪರವಾಗಿ ಇಂತಹವೊಂದು ಸೊಲ್ಲನ್ನೆತ್ತಿದ್ದರು. ಈಗ ಇಂತಹ ಬೇಡಿಕೆಗಳು ನೂರಾರು ದಿಕ್ಕುಗಳಿಂದ ಬರತೊಡಗಿ ಬಲಗೊಂಡು ಸಂಸ್ಕೃತವು ಹಿಂದಿಗೆ ಸ್ಥಳ ತೆರವು ಮಾಡಲೇ ಬೇಕಾಗುತ್ತವೆ. ಅಂತೆಯೇ ಒಂದೆಡೆ ಬಂಗಾಲಿಯೂ, ತಮಿಳೂ, ತೆಲುಗೂ, ಕನ್ನಡವೂ ಅಂತಹ ಪ್ರಸಂಗಗಳಲ್ಲೆಲ್ಲಾ ಸಂಸ್ಕೃತದ ಸ್ಥಾನವನ್ನು ಆಕ್ರಮಿಸುತ್ತವೆ. ಬೈಬಲಿನ ಅನುವಾದವು ಇಂಗ್ಲೀಷ್ ಭಾಷೆಗೆ ಬಂದಾಗ ಇಂಗ್ಲೆಂಡಿನ ಕ್ರೈಸ್ತ ಸರ್ಕಾರವು ಅಧಿಕಾರದಲ್ಲಿದ್ದು ಒಂದು ಅಧಿಕೃತ ಅನುವಾದ ಸಂಸ್ಕರಣವನ್ನು ಪ್ರಕಟಿಸಿತು, ಅದೇ ಇಂದಿಗೂ ಸರ್ವಮಾನ್ಯವಾದ ಬೈಬಲಿನ ಪ್ರತಿಯೆನಿಸಿದೆ. ಭಾರತದಲ್ಲಿ ಅಂತಹ ಘಟನೆ ಸಾಧ್ಯವಿಲ್ಲ. ನಮ್ಮ ದೇಶದಂತಹ ಧರ್ಮನಿರಪೇಕ್ಷವಾದ ಸರ್ಕಾರವು ಯಾವ ಒಂದು ಕೃತಿಯನ್ನೂ ಅಧಿಕೃತ ಅನುವಾದವೆಂದೊಪ್ಪಲು ಸಾಧ್ಯವಿಲ್ಲ. ಹೀಗಾಗಿ ಬಹುಬೇಗನೆ ಧರ್ಮಗ್ರಂಥಗಳ ಒಂದು ಗೊಂಡಾರಣ್ಯ ಮಧ್ಯದಲ್ಲಿ ನಾವಿರುವೆವಲ್ಲದೆ, ಒಂದೊಂದು ಪ್ರಾಂತ್ಯದಲ್ಲಿಯೂ

ಅನೇಕ ಧರ್ಮಗ್ರಂಥಗಳ ಅನುವಾದಗಳು ಹುಟ್ಟಿಕೊಳ್ಳುತ್ತವೆ. ಇಂತಹ ವಾತಾವರಣದಲ್ಲಿ ದೇವಾಲಯಗಳಲ್ಲಿಯೂ ಸಹ ಸಂಸ್ಕೃತದ ಬದಲು ಪ್ರಾಂತ್ಯ ಭಾಷೆಯನ್ನೇಕೆ ಉಪಯೋಗಿಸಬಾರದೆಂದು ಪ್ರಶ್ನೆ ಉದ್ಭವಿಸುತ್ತದೆ. ಕೂಡದು ಎನ್ನಲು ಕಾರಣಗಳೇನೂ ಉಳಿದಿರುವುದಿಲ್ಲ. ಇವುಗಳೆಲ್ಲದರ ಪರಿಣಾಮವೆಂದರೆ ಸಂಪೂರ್ಣ ಅವ್ಯವಸ್ಥೆ, ಹಿಂದೂ ಸಮಾಜವು ಒಡೆದು ಅನೇಕ ಸಣ್ಣ ಸಣ್ಣ ಚೂರುಗಳಾಗುತ್ತವೆ ಅದನ್ನು ಜೋಡಿಸಿ ಹಿಡಿದಿದ್ದ ಒಂದೇ ಒಂದು ಶಕ್ತಿಯು ಅಲ್ಲಿ ಉಳಿದಿರುವುದಿಲ್ಲ. ಐಕ್ಯತೆಯ ಹೆಸರಿನಲ್ಲಿ ಸಮಸ್ಯಾತ್ಮಕ ಜಯವುಳ್ಳ ಪ್ರಯೋಗವೊಂದರ ಪರೀಕ್ಷೆಯಲ್ಲಿ ನಾವು ತೊಡಗುತ್ತೇವಲ್ಲದೆ ಒಂದು ಫಲಿತಾಂಶವಂತೂ ನಿರ್ಧರವಾಗಿಯೇ ಇರುತ್ತದೆ. ಅದೆಂದರೆ ಶತಮಾನಗಳಿಂದಲೂ ಏಕಮೇವಾದ್ವಿತೀಯವಾದ ಒಗ್ಗಟ್ಟಿನ ಶಕ್ತಿಯೊಂದರ ನಾಶವೇ ಆಗಿರುತ್ತದೆ. ಇದೊಂದು ನಿಶ್ಚಿತ ಪರಿಣಾಮದ ಹೊಣೆಗಾರಿಕೆಯ, ತುಂಟತನದ ಅಧಿಕಶಕ್ತಿಯ ಪ್ರಯೋಗವಾಗುತ್ತದಷ್ಟೆ. ನಾವಿದನ್ನು ಕಾರ್ಯಗತಗೊಳಿಸುವುದು, ಸಾಧುವಾಗದು. ಹಗುರವಾಗಿಯೂ ನಾವು ಯೋಚಿಸುವಂತಿಲ್ಲ. ತ್ರಿಭಾಷಾ ಸೂತ್ರಕಾರರ ಉದ್ದೇಶವೇನೂ ಭಾರತೀಯ ಹಿಂದೂ ಸಮಾಜವನ್ನು ಒಡೆಯಬೇಕೆಂದಿದ್ದರೂ ನಮಗೆ ಸದ್ಯಕ್ಕೆ ಅವರ ಉದ್ದೇಶಬೇಕಿಲ್ಲ. ಅವರು ಹೊರಗೆಡಹುತ್ತಿರುವ ಸೂತ್ರದ ಪರಿಣಾಮದಲ್ಲಿ ನಾವು ಅತ್ಯಾಸಕ್ತರಾಗಿದ್ದೇವೆ.

ವಿಶ್ವದ ಸಂಸ್ಕೃತಿಗೆ ಭಾರತದ ಕೊಡುಗೆಯೆಂದರೆ ಸಂಸ್ಕೃತ ಸಾಹಿತ್ಯವಾಗಿದೆ. ಭವಿಷ್ಯತ್ ಕಾಲದಲ್ಲಿಯೂ ಕೆಲವು ಜನರು ಹೇಗಾದರೂ ಸಂಸ್ಕೃತ ಭಾಷೆಯನ್ನು ಓದಿಯೇ ಓದುವರೆಂಬುದಲ್ಲೇನೋ ಸಂಶಯವಿಲ್ಲ. ಪ್ರಾಚೀನ ಇಜಿಪ್ತ ಬಾಷೆಗೂ, ಅಸ್ಸಿರಿಯನ್ನರ ಭಾಷೆಗೂ ಅಜ್‌ಟೆಕ್ ಭಾಷೆಗೂ ಜೀವನವನ್ನೆ ಮುಡಿಪಾಗಿಡಬಲ್ಲ ವಿದ್ಯಾರ್ಥಿಗಳನ್ನು ಎಲ್ಲ ಕಾಲಗಳಲ್ಲಿಯೂ ಕಾಣಬಹುದಾದರೂ ಸಮೀಪದ ಭವಿಷ್ಯತ್ತಿನಲ್ಲಿಯೇ ನಾವು ಉಂಟುಮಾಡುತ್ತಿರುವ ಪರಿಸ್ಥಿತಿಯಿಂದ ಸಂಸ್ಕೃತವು ತಾನು ಹುಟ್ಟಿದ ದೇಶದಲ್ಲಿಯೇ ಜೀವಂತವಾದ, ಸ್ಫೂರ್ತಿದಾಯಕವಾದ ಭಾಷೆಯಾಗಿ ಉಳಿಯದೇ ಹೋಗುತ್ತದೆ. ಇಂದು ಸಂಸ್ಕೃತವು ನಮ್ಮ ಸಂಸ್ಕೃತಿಯ, ಪರಂಪರಾಗತ ಚರಿತ್ರೆಯ, ಸಂಗ್ರಹ ಕೋಶವಾಗಿರುವುದಲ್ಲದೆ ಭಾರತವು ಪ್ರತಿನಿಧಿಸುವ ಭಾವನೆಗಳ ಚಿಲುಮೆಯೂ ಆಗಿದೆ. ನಾಳೆ ಅದು ನಮ್ಮ ಜೀವನದ ಮೇಲೆ ಯಾವ ನೈಜ ಪರಿಣಾಮವನ್ನು ಮಾಡಲಾರದು. ಇದಕ್ಕೆ ಬದಲಾಗಿ ಕೇವಲ ಕಸಕಡ್ಡಿಗಳಂತಹ ವ್ಯರ್ಥ ವಸ್ತುಗಳಲ್ಲದೆ ಬೇರೇನೂ ನಮಗೆ ದೊರೆಯದಿದ್ದರೂ, ನಾವು ತೆರಬೇಕಾಗುವ ಬೆಲೆ ಅಪಾರವಾಗುತ್ತದೆ

ಪ್ರಧಾನ ಮಂತ್ರಿಗಳ (ಸ್ವ: ಶ್ರೀ ಲಾಲಬಹಾದುರ ಶಾಸ್ತ್ರಿಗಳು) ನಿವಾಸದಲ್ಲಿ ಅಂದೊಮ್ಮೆ ಸಭೆ ನಡೆದಾಗ ಈ ಕೆಲವು ಪ್ರಶ್ನೆಗಳನ್ನು ನಾನು ಎತ್ತಲಾಗಿ, ಸಂಸ್ಕೃತ ಭಾಷೆಯ ಬಗೆಗೆ ಸಹಾನುಭೂತಿಯನ್ನು ವ್ಯಕ್ತಪಡಿಸುವ ಸೌಜನ್ಯವನ್ನವರು ತೋರಿಸಿದರು. ಅಂತಹ ಅಡೆತಡೆಗಳುಂಟಾಗುವುದಾದರೂ ಸಂಸ್ಕೃತವು ಉಳಿವುದಲ್ಲದೆ ಅಧ್ಯಯನ ಮಾಡಲ್ಪಡುವುದೆಂಬುದನ್ನು ಗಮನಿಸಲು ಬಹು ಸಂತೋಷಪಟ್ಟರು. ನಾವೆಲ್ಲರೂ ಸಂಸ್ಕೃತ ಭಾಷೆಯು ಉಳಿದುಕೊಳ್ಳಲು ಹೆಚ್ಚಿನ ಅಂತಃ ಶಕ್ತಿಯನ್ನು ಹೊಂದಿರುವುದೆಂದು ನಂಬುತ್ತೇವೆಯಾದರೂ ಈಗಿನ ಪರಿಸ್ಥಿತಿಯಲ್ಲಿ ನಾವು ತಿಳಿದೂ ತಿಳಿದೂ ಉಂಟುಮಾಡುತ್ತಿರುವ ಅದರ ಹಾದಿಯಲ್ಲಿನ ಕಂಟಕಗಳ ಆತಂಕವನ್ನು ನಿವಾರಿಸಿಕೊಂಡು ಸಂಸ್ಕೃತ ಬದುಕುಳಿಯುತ್ತದೆಂದು ಹೇಳುವುದು ಕೇವಲ ಒಂದು ಸಾತ್ವಿಕ ಬಯಕೆಯೆನಿಸಬಹುದಷ್ಟೇ.

ನಾನು ಮಾಡಿದ ಮತ್ತೊಂದು ಸಲಹೆಯನ್ನು ಪ್ರಧಾನ ಮಂತ್ರಿಗಳು ಮೆಚ್ಚಿಕೊಂಡು ಸೌಜನ್ಯ ತೋರಿದರು. ಅವರ ಸೌಹಾರ್ದತೆಗೆ ಒಂದು ರೂಪುಕೊಡಲು ನಾವು ಆದಷ್ಟು ಶೀಘ್ರ ಸಮರ್ಥರಾಗೋಣವೆಂದು ಆಶಿಸೋಣ. ಕೇಂದ್ರ ಶಾಸನ ಸಭೆಯಲ್ಲೇನಾದರೂ ಲೋಕಸಭೆಯು ತ್ರಿಭಾಷಾ ಸೂತ್ರದ ಒಪ್ಪಿಗೆಯ ವಿಚಾರದ ಬಗ್ಗೆ ನಿರ್ಣಯಮಾಡಿದ್ದಾದರೆ ನನ್ನ ಅಥವಾ ಬೇರಾರದ್ದೇ ಆದರೂ ಇಂತಹ ಸಲಹೆಗಳು ಬಹುಜನ ಸಮ್ಮತಿ ಪಡೆಯಲಾರವೆಂಬ ಭಯ ನನಗಿದೆ. ನನ್ನ ಸಲಹೆಯಾದರೋ ಸಂಗ್ರಹವಾಗಿ ಈ ರೀತಿಯಿದೆ.

ಈವರೆಗೆ ರಾಷ್ಟ್ರೀಯ ಭಾವೈಕ್ಯತಾ ಸಮಸ್ಯೆಯು ಅದರ ಭಾಷಾತ್ಮಕ ವಿಚಾರವಾಗಿಯಂತೂ ಕೇವಲ ರಾಜಕೀಯ ಧುರೀಣರೂ ಹಾಗೂ ಆಡಳಿತಗಾರರುಗಳಿಂದಲೇ ಪರಿಹರಿಸಲು ಪ್ರಯತ್ನಪಡಲ್ಪಟ್ಟಿದೆ. ಶಿಕ್ಷಣತಜ್ಞರಾರಿಗೂ ಏನನ್ನೂ ತಿದ್ದಿಕೊಳುವುದಾಗಲಿ, ಶಿಕ್ಷಣ

(64ನೇ ಪುಟ ನೋಡಿ)

# ವಿಮರ್ಶಾತ್ಮಕ ಪುಸ್ತಕ ಪರಿಚಯ (II)

# 'ರೂಪದರ್ಶಿ'

ಇದು ಕಲ್ಪನೆಯ ಮಹಾ ಚಿತ್ರ. 'The face of Judas Iscariot' ಎಂಬ ಒಂದು ಪುಟದ ಸಣ್ಣ ಕತೆ, ಇಲ್ಲಿ ಸುಮಾರು 340 ಪುಟಗಳ ಕಾದಂಬರಿಯಾಗಿ ಎಳೆಯಲ್ಪಟ್ಟಿದೆ.

ಕಥೆ :

ಅರ್ನೆಸ್ಟ್ ಎಳೆಯ ವಯಸ್ಸಿನ, ಬಡವರ ಹುಡು ಗನಾದರೂ ದಯಾರ್ದ್ರ ಹೃದಯಿ. ಮಳೆ ಬಂದ ಬಾಲಕ ಏಸುವಿನ ರೂಪದರ್ಶಿಗಾಗಿ ಹುಡುಕುತ್ತಾ ಬಂದ ಮೈಕಲ್ ಏಂಜಲೋ, ಆ ಬಾಲಕನನ್ನು ಕಂಡು, ಅವನೊಡನೆ ಆಡಿದ. ಏಸುವಿನಲ್ಲಿ ಕಾಣಬಹು ದಾದ ದಯೆ, ಅನುತಾಪ, ಸೌಮ್ಯತೆ ಆ ಬಾಲಕ ನಲ್ಲಿತ್ತು. ಮೈಕಲ್ ಅವನನ್ನು ತನ್ನ ರೂಪದರ್ಶಿ ಯನ್ನಾಗಿ ನಿಶ್ಚಯಿಸಿದ. ಅವನ ಅಜ್ಜಿಯನ್ನು ಕಂಡು ವಿಚಾರವನ್ನು ತಿಳಿಸಿದ. ತಾಯಿಯಿಲ್ಲದ ತಬ್ಬಲಿಯ ಭವಿಷ್ಯ ಒಳ್ಳೆಯದಾದೀತೆಂಬ ಆಸೆಯಿಂದ ಅಜ್ಜಿ ಒಪ್ಪಿಕೊಂಡಳು ಎಲ್ಲಾ ಫ್ಲಾರೆನ್ಸ್ ನಗರವನ್ನು ಸೇರಿದರು. ದೇವಾಲಯದಲ್ಲಿ ಚಿತ್ರಣಕಾರ್ಯ ಸಾಗಿ, ಮುಗಿಯಿತು. ಅಜ್ಜಿಗೂ ಸೌಕರ್ಯ, ಹಣ ದೊರೆ ತವು. ಅಜ್ಜಿ-ಮೊಮ್ಮಗ ಪೀಸಾ ನಗರಕ್ಕೆ ಹಿಂದಿರು ಗಿದರು. ಅತ್ತ ಮೈಕಲನು ಚಿತ್ರಮಾಲೆಯ ಕೊನೆಗೆ ಬಂದ. ಜುದಾಸನ ರೂಪದರ್ಶಿಯನ್ನು ಹುಡುಕ ಬೇಕಾಯಿತು. ರೋಂನಿಂದ ಸ್ನೇಹಿತ ಬೆನೆಟ್ಟೋವಿನ ಮರಣ ವಾರ್ತೆ ಬಂದಿತು. ಅಲ್ಲಿಗೆ ಹೋಗಿ ಅವನ ಮಕ್ಕಳ ಮೇಲ್ವಿಚಾರಣೆ ನೋಡಿಕೊಳ್ಳಬೇಕಾಯಿತು.

ಅವರ ಸಹಾಯಕ್ಕಾಗಿ ಬೇಡಲು ಧರ್ಮ ಗುರುವಿನ ಬಳಿ ಹೋದಾಗ ಅವರು ಅದಕ್ಕೆ ಒಪ್ಪಿ, "ನನ್ನ ಆಶೆ ಯೊಂದಿದೆ. ಈ ಅರಮನೆಯಲ್ಲಿ ಒಂದು ಭವ್ಯ ಸಮಾಧಿಯನ್ನು ಕಟ್ಟಿಕೊಡು" ಎಂದು ನೇಮಿಸಿದರು. ಆ ಕಾರ್ಯವನ್ನು ಮುಗಿಸಿ 'ಜುದಾಸನ ರೂಪದರ್ಶಿ ಗಾಗಿ ಹುಡುಕುತ್ತಾ ಹೋದಾಗ ಬೆನೆಟ್ಟೋವಿನ ಮಗಳು ಲೀನಳ ನೆನಪಾಗಿ 'ಕರಾರಾ' ನಗರವನ್ನು ಸ ನು. ಅಲ್ಲಿ ಲೀನಾ-ಟಾಯಿಟ್‌ರ ದಾಂಪತ್ಯ ಜೀವನ ಸುಗಮವಾಗಿಲ್ಲದಿದ್ದುದನ್ನು ಕಂಡು ಚಿಂತೆಗೊಳ ಗಾದ ಮೈಕಲ್, ಅವರನ್ನು ಆಶೀರ್ವದಿಸಿ, ಅವರ ಒಳಿತಿಗೆ ಪ್ರಾರ್ಥಿಸಿ, ಜುದಾಸರೂಪಿಯನ್ನು ಹುಡು ಕುತ್ತಾ ಹೊರಟನು.

ಎಂಪೋಲಿ ಗ್ರಾಮವನ್ನು ಸೇರಿದ ಮೈಕಲ್. ಅಂದು ರಾತ್ರಿ ಹೆಂಡದ ಅಂಗಡಿಗೆ ಹೋದ. ಅಲ್ಲಿ ಒಬ್ಬ "ಕ್ರೂರ-ಮುಖಿ" ಯನ್ನು ಕಂಡ. ಅವನು ರೂಪ ಭಾವಗಳಲ್ಲಿ ಜುದಾಸನನ್ನು ಹೋಲುತ್ತಿದ್ದ. ಅವನೇ ಗರಿಬಾಲ್ಡಿ. ಅವನಿಗೆ ಹಣ-'ರೈ' ಗಳ ಆಸೆ ತೋರಿಸಿ, ರೂಪದರ್ಶಿಯಾಗಿ ಉಪಯೋಗಿಸಿಕೊಳ್ಳಲು ಫ್ಲಾರೆನ್ಸ್‌ಗೆ ಕರೆತಂದನು. ಅಲ್ಲಿ ಗರಿಬಾಲ್ಡಿ ಹಳೆಯ ಚಿತ್ರಗಳನ್ನು ಕಂಡ. ಬಾಲಕ ಏಸುವಿನ ಚಿತ್ರವನ್ನು ಕಂಡಾಗ ಪೂರ್ವಸ್ಮೃತಿ ಉಂಟಾಯಿತು. ತಾನು ಅಲ್ಲಿಗೆ ಹಿಂದೊಮ್ಮೆ ಅದೇಕಾರ್ಯಕ್ಕೆ ಬಂದಿದ್ದಂತೆ ತೋರಿತು. ಇಷ್ಟುದಿನ ಮರೆತುಹೋಗಿದ್ದ ಹಳೆಯ ವಿಚಾರಗಳೆಲ್ಲ ಒಂದೊಂದಾಗಿ ನೆನಪಿಗೆ ಬಂದು ಕೈಕಾಲು ಗಳ ಶಕ್ತಿಉಡುಗಿ, ನಡುಗಿದುವು, ಧ್ವನಿಕ್ಷೀಣಿಸಿತು;

ವೈ ಬೆವರಿತು, ಹೀನಧ್ವನಿಯಿಂದ ಅರಚುತ್ತಾ ಕೆಳಗೆ ಉರುಳಿಕೊಂಡ. ಚೇತನ ಬಂದಮೇಲೆ ಮೈಕಲನನ್ನು ಗುರುತಿಸಿ ಹೇಳಿದ-"ಚಿಕ್ಕಪ್ಪಾ, ನೀನು ಮೈಕಲ್, ನಾನು ಅರ್ನೆಸ್ಟ್" ಮೈಕಲ್ ನೊಂದು, ಅವನ ಕತೆಯನ್ನು ಕೇಳಿದ. ಗರಿಬಾಲ್ಡಿ ತನ್ನ ಕತೆಯನ್ನು ತಿಳಿಸಿದನು.

"ಚಿಕ್ಕಪ್ಪ, ನೀನು ನಮಗೆ ಕೊಡಿಸಿದ ಹಣವನ್ನೆಲ್ಲಾ ನನ್ನ ವಿದ್ಯಾಭ್ಯಾಸಕ್ಕೆಂದು, ಯಜಮಾನ ಗಯೋವನಿಯ ಬಳಿಯಲ್ಲಿ ಇಟ್ಟಳು, ನಮ್ಮ ಅಜ್ಜಿ. ದೇಹಶಕ್ತಿ ಇಲ್ಲದಿದ್ದರೂ, ನಾನೂ ಬೇಡವೆಂದರೂ ದುಡಿದು ಬಳಲಿ, ಖಾಯಿಲೆ ಬಿದ್ದಳು. ನನ್ನ ಪ್ರಯತ್ನವೆಲ್ಲ, ನಿಷ್ಫಲವಾಗಿ ಅಜ್ಜಿಯನ್ನು ಕಳೆದುಕೊಂಡೆ. ನನ್ನ ತಾಯಿಯಂತಿದ್ದ ಲಿಸ್ಸಾ-ನನ್ನೆಟ್ಟಿಯರು ನನ್ನ ಮೇಲ್ವಿಚಾರಣೆಗೆ ಮುಂದೆಬಂದರೂ, ಗಯೋವನಿಯ ಆಶ್ರಯವನ್ನೇ ಸೇರಬೇಕಾಯಿತು ಅಲ್ಲಿ ಅವರು ನನ್ನನ್ನು ನಾಯಿಗಿಂತ ಕೀಳಾಗಿ ಕಂಡರು. ಕಳ್ಳತನದ ಅಪವಾದವನ್ನು ಹೊರಿಸಿದರು. ಪೋಲೀಸಿನವರಿಂದಲೂ ಕರುಣೆ ಇಲ್ಲದೆ ಏಟುಗಳು ಬಿದ್ದುವು. ಏಟುತಿಂದ ಮೈ, ನೊಂದ ಮನಸ್ಸುಗಳಿಂದ ಲಿಸ್ಸಾ ತಾಯಿಯ ಬಳಿಗೆ ಹೋದೆ. ಅಲ್ಲಿ ಹೃದಯಕ್ಕೆ ತಂಪೊದಗಿತು. ನಾನು ಅಲ್ಲಿಯೇ ಇದ್ದರೆ, ನನ್ನೆಟ್ಟಿಯನ್ನು ಅಂಗಡಿ ಮನೆಯಿಂದ ಓಡಿಸುವುದಾಗಿ ಗಯೋವನಿಯು ಹೆದರಿಸಿದಾಗ, ಅವರಿಗೆ ಹೇಳದೆ ಕೇಳದೆ, ಕಾಗದ ಮಾತ್ರ ಬರೆದಿಟ್ಟು. ಅಲ್ಲಿಂದ ಹೊರಟುಬಿಟ್ಟೆ. ದಾರಿಯಲ್ಲಿ 'ನಿನ್ನಿ' ಎಂಬ ನಾಯಿ ಜೊತೆಸೇರಿತು. ಒಬ್ಬ ತೋಟದ ಯಜಮಾನನ ಬಳಿ ಕೆಲಸಕ್ಕೆ ಸೇರಿದೆ ಆತ ದಯಾಳು, ನನ್ನನ್ನು ಚೆನ್ನಾಗಿ ನೋಡಿದ. ಒಂದು ದಿನ ಲಿಸ್ಸಾ ನನ್ನೆಟ್ಟಿಯರು ಬಂದಾಗ ನಮ್ಮ ಯಜಮಾನ ಬೇರಾರೂ ಅಲ್ಲದೆ ಲಿಸ್ಸಾನ ಅಣ್ಣಾ ಎಂದು ತಿಳಿಯಿತು. ಎಲ್ಲಾ ಸಂತೋಷಗೊಂಡೆವು. ಒಂದುದಿನ ಕರಡಿಯೊಡನೆ ಹೊರಾಡಿದ ನಿನ್ನಿ ಮರಣಹೊಂದಿತು ನನಗೆ ದುಃಖವಾಯಿತು ಕೆಲವೇ ದಿನದಲ್ಲಿ ಯಜಮಾನರ ಅಣ್ಣ ತೀರಿಹೋದುದರಿಂದ ಅವರು ಅಣ್ಣನ ಊರಿಗೆ ಹೊರಟು ಹೋದರು. ಅವರ ಜಮೀನು ಹರಾಜಾಗಿ, ಅದು ಗಯೋವನಿಯ ಕೈಯನ್ನು ಸೇರಿತು. ಅಲ್ಲಿಂದ ಹೊರಟ ನಾನು ಮತ್ತೊಂದು ತೋಟದಲ್ಲಿ ಕೆಲಸಕ್ಕೆ ಸೇರಿದೆ. ಅಲ್ಲಿ ಯಜಮಾನರ ತಮ್ಮನ ಮಾತಿನಂತೆ ಸುಳ್ಳು ಲೆಕ್ಕ ಬರೆಯಲು ನಾನು ಒಪ್ಪಲಿಲ್ಲ. ಆ ಅಣ್ಣ ತಮ್ಮಂದಿರಲ್ಲಿ ವೈಮನಸ್ಯ ಬೆಳೆದು ವಿಭಾಗವಾದರು. ತೋಟ ತಮ್ಮನ ಪಾಲಿಗೆ ಹೋಯಿತು. ವಿಧಿ ಕರೆದುಕೊಂಡು ಹೋದತ್ತ ಹೆಜ್ಜೆಹಾಕುತ್ತಾ ಕರಾರಾ ನಗರವನ್ನು ಸೇರಿದೆ. ಟಾಯಿಟ್ ಎಂಬ ಅಮೃತಶಿಲೆ ವ್ಯಾಪಾರಿಯ ಬಳಿ ಕೆಲಸಕ್ಕೆ ನಿಂತೆ. ಅಲ್ಲಿ ನನ್ನ ಜೀವನ ಉತ್ತಮಗೊಳ್ಳುವುದೆಂಬ ಭರವಸೆಯನ್ನು ನೀಡಿದ ವಿಧಿ, ಪ್ರೇಮಮೂರ್ತಿ 'ಯುಫೋನೋ' ಳನ್ನು ತೋರಿಸಿತು. ಅವಳ ತಂದೆ ತಾಯಿಗಳು ಆದರಿಸಿದರು ನಮ್ಮ ಮದುವೆಯ ದಿನವೂ ನಿಶ್ಚಿತವಾಯಿತು. ಆ ವೇಳೆಗೆ ಅಲ್ಲಿಗೊಬ್ಬ ಚಿತ್ರಕಾರ, ನನ್ನ ಭಾಗ್ಯದ ಶತ್ರುವಿನಂತೆ ಬಂದ. ನನ್ನನ್ನು ರೂಪದರ್ಶಿಯನ್ನಾಗಿಟ್ಟುಕೊಂಡು "ನಿದ್ರಿಸುತ್ತಿರುವ ಮನ್ಮಥ" ಎಂಬ ಚಿತ್ರವನ್ನು ಬರೆದ. ನನ್ನ ಸೌಂದರ್ಯ ಮನೆಮನೆಯ ಮಾತಾಯಿತು. ಅದೇ ನನ್ನ ಮೃತ್ಯುವಾಯಿತು. ಲೀನಾ ತಾಯಿ ಮಗನ ಹುಟ್ಟು-ಹಬ್ಬಕ್ಕೆ ಆಹ್ವಾನಿಸಿದಳು. ಅಲ್ಲಿಂದ ಹಿಂದಿರುಗಿ ಮಳಿಗೆಗೆ ಬಂದಾಗ ಸಂಶಯಗೊಂಡ ಟಾಯಿಟ್ ಕೋಪಗೊಂಡಿದ್ದ. ವ್ಯಾಪಾರದಲ್ಲಿ ಆಗಿದ್ದ ನಷ್ಟವೂ ಅವನನ್ನು ಕೆರಳಿಸಿತ್ತು. ಭಾರವಾದ ಅಮೃತಶಿಲೆಯನ್ನು ನನ್ನ ಕಡೆಗೆ ಎಸೆದ. ಪ್ರಜ್ಞೆ ತಪ್ಪಿ ಕೆಳಕ್ಕೆ ಉರುಳಿದೆ. ಗಾಯುವಾಗುತ್ತಾ ಬಂತು. ಆದರೆ ನನ್ನ ಮುಖ ಕುರೂಪವಾಗಿತ್ತು; ಯುಫೋನೋಳಿಗೆ ಮುಖ ತೋರಿಸಲಾರದೆ ಓಡಿಹೋಗಿ ಬೆಟ್ಟದಲ್ಲಿ ಬಚ್ಚಿಟ್ಟುಕೊಂಡೆ. ಟಾಯಿಟ್‌ನನ್ನು ಕೊಂದು ಸೇಡುತೀರಿಸಿಕೊಳ್ಳಲು ನಿಶ್ಚಯಿಸಿದೆ ಪೀಟರನ ದೇವಸ್ಥಾನಕ್ಕೆ ಪ್ರಧಾನ ಸ್ನಾನಿಕಳಾಗಿ ಬಂದ ಯುಫೋನೋಳನ್ನು ಕಣ್ತುಂಬ ಕಂಡು ತೃಪ್ತಿ ಹೊಂದಿದೆ. ಟಾಯಿಟ್ಟನನ್ನು ಹೊಡೆದು, ನದಿಗೆ ಉರುಳಿಸಬೇಕೆಂದು, ಮಾವಿನ ತೋಪಿನಲ್ಲಿ, ಅನುಕೂಲವಾದ ಸ್ಥಾನದಲ್ಲಿ ಕಾದಿದ್ದು, ಹರಿತವಾದ ಪರಿಘದಿಂದ, ಬಲವಾದ ಏಟನ್ನು ಕೊಟ್ಟೆ. ಅದು ಅವನ ಎಡಭುಜಕ್ಕೆ ತಾಗಿತು. ಅವನು ನನ್ನ ಹೊಟ್ಟೆಗೆ ಬಲವಾಗಿ ಒದ್ದ. ನಾನು ತಲೆಕೆಳಗಾಗಿ ನದಿಗೆ ಬಿದ್ದೆ. ಅಷ್ಟೇ ನನಗೆ ಜ್ಞಾಪಕ. ಆ ಪೆಟ್ಟನಿಂದ ನನಗೆ ಹಿಂದಿನ ನೆನಪೇ ಮರೆತುಹೋಯಿತು. ಇಲ್ಲಿ ಅದು ಮರುಕಳಿಸಿತು."

ಕತೆಯನ್ನು ಕೇಳಿ ಮೈಕಲನ ಹೃದಯ ಕಿತ್ತು ಬಂತು. ಆ ವೇಳೆಗೆ ಪ್ರಾರ್ಥನಾ ಗಂಟೆಯಾಗಲು ಅದನ್ನು ಕೇಳುತ್ತಲೇ ಗರಿಬಾಲ್ಡಿ ಕಿರುಚಿದ. ಅವನಲ್ಲಿದ್ದ ಸೈತಾನ ಭಯಂಕರವಾಗಿ ಆರ್ಭಟಿಸಿದ. ಮೈಕಲನು, "ನೀನು ಸೈತಾನ, ದೇವಾಲಯದಲ್ಲಿ ನಿನಗೆ ಪ್ರವೇಶವಿಲ್ಲ. ತೊಲಗು. ಏಸುವಿನ ಆಜ್ಞೆ" ಎಂದ. ಸೈತಾನ ರೂಪಿ, ಒಮ್ಮೆ ಮೇಲಕ್ಕೆ ಹಾರಿ,ಅಟ್ಟಣೆಯನ್ನು ಅಪ್ಪಳಿಸಿ ಕೆಳಗುರುಳಿದ, ಸೈತಾನ ತೊಲಗಿದ. ಗರಿಬಾಲ್ಡಿ ಮೊದಲಿನ ಅರ್ನೆಸ್ಟ್ ಆಗಿ ಇಹಲೋಕವನ್ನು ತೊರೆದ. ಮೈಕಲ್ ಅವನಿಗಾಗಿ ಪ್ರಾರ್ಥಿಸಿ, ಸ್ಮಾರಕ ಮಂಟಪ ಕಟ್ಟಿದ.

ನಿರೂಪಣೆ :

ಈ ಕತೆಯನ್ನು ವಿರಳ–ವಿರಳವಾಗಿ,ಭಾವಪೂರ್ಣವಾಗಿ ವಿಸ್ತರಿಸಿರುವ ಜಾಣ್ಮೆ, ಸ್ತುತ್ಯಾರ್ಹ. "Model"–ಇದಕ್ಕೆ ಸಮನಾರ್ಥವಾದ, ಸಮರ್ಪಕವಾದ ಕನ್ನಡದ ಪದ ಇದುವರೆಗೆ ಇರಲಿಲ್ಲ. ಈಗ ಶ್ರೀ ಐಯರ್ ಅವರು ಸೃಜಿಸಿಕೊಟ್ಟಿರುವ "ರೂಪದರ್ಶಿ" ಪದ ಕನ್ನಡಕ್ಕೆ ಎಂಥಹ ಸಮರ್ಥವಾದ ಕಾಣಿಕೆಯೋ ಇವರ ಈ ಆದೇಹೆಸರಿನ ಕಥಾನಕವೂ ಅಂಥದೇ ಕಾಣಿಕೆ." (ಕನ್ನಡನುಡಿ 13.1) ಶ್ರೀ ಜಿ.ಪಿ. ಅವರ ಈ ಮಾತು ಸತ್ಯ. "ಶಾಂತಲಾ" ದಲ್ಲಿರುವಂತೆಯೇ, ಇಲ್ಲಿಯೂ ಕತೆಯ ಓಟ ಸ್ವಲ್ಪ ಮಂದವೇ. ವರ್ಣನೆಗಳು ಕೆಲವು ವೇಳೆ ಅತಿಯೆನಿಸಿ "ಸಕ್ಕರೆಯೂ ಕಹಿಯಾದಂತೆ" ಆಗಿದೆ. ಉದಾ: ಲೀನಳ ಸಂಸಾರದ ವರ್ಣನೆ [80-110] ಅಜ್ಜಿಯ ಮರಣ [161-178]

ಇವೆಲ್ಲ ಇನ್ನು ಸ್ವಲ್ಪ ಕಿರಿದಾಗಿದ್ದರೂ ಕತೆಯ ಸೊಗಸು ಕೆಡುತ್ತಿರಲಿಲ್ಲ. ಆದರೂ, ಮೈಕಲ್ ಅರ್ನೆಸ್ಟನನ್ನು ಸಂಧಿಸಿದುದು, ಜುದಾಸನನ್ನು ಅಸಹ್ಯ ವಾತಾವರಣದಲ್ಲಿ ಸಂಧಿಸಿದುದು, ಯುವೋನೋ ಅರ್ನೆಸ್ಟ್ ಸಲ್ಲಾಪ, ಅವರ ಅಂತಿಮ ಭೇಟಿ, ಇವೆಲ್ಲಾ ಸೊಗಸಾಗಿ ಚಿತ್ರಿತವಾಗಿವೆ. ನಿನ್ನಿಯ ಹೋರಾಟ, ಅರ್ನೆಸ್ಟೋ ಗಯೋವನಿಯಲ್ಲಿ ಬಾಳಿದುದು ಸಹ ಅಷ್ಟೇ ಹೃದ್ಯವಾಗಿವೆ. ಅಜ್ಜಿಯ ಮರಣದಿಂದ ಹಿಡಿದು. ಅರ್ನೆಸ್ಟೋ ನದಿಯಲ್ಲಿ ಬಿದ್ದು ಸ್ಮೃತಿ ಕಳೆದುಕೊಳ್ಳುವವರೆಗಿನ ಸುದೀರ್ಘ ಕಥಾನಕವನ್ನು ಗರಿಬಾಲ್ಡಿಯ ಬಾಯಲ್ಲಿ ಹೇಳಿಸಿರುವುದು ತುಂಬಾ ಅಸಹಜವಾಗಿ ಕಾಣುತ್ತದೆ. ಇದರಲ್ಲಿ ಕೆಲವು ಭಾಗವನ್ನಾದರೂ-ಕೊನೆಯಪಕ್ಷ ಅರ್ನೆಸ್ಟೋ ಕರಾರಾನಗರಕ್ಕೆ ಬರುವವರೆಗಾದರೂ-ಕವಿಯು ತನ್ನ ಮಾತುಗಳಲ್ಲಿ ತಿಳಿಸಿದ್ದರೆ ಚೆನ್ನಾಗಿತ್ತು ಅನಿಸುತ್ತದೆ.

ಈ ಒಂದು ದೋಷವನ್ನು ಒತ್ತಟ್ಟಿಗಿಟ್ಟುನೋಡಿದರೆ, ಸಹಜತೆಯು ಕತೆಯ ಮೊದಲಿನಿಂದ ಕೊನೆಯವರೆಗೂ ಹಾಸು ಹೊಕ್ಕಾಗಿದೆ. ಹಸುಮಕ್ಕಳ ಮೈತ್ರಿ; ಅಜ್ಜಿಯು, ತಾಯಿಲ್ಲದ ತನ್ನ ಮೊಮ್ಮಗನಿಗಾಗಿ ದುಡಿಯುವುದು; ಬಾಂಬಿ—ಅಜ್ಜಿ ಇವರಲ್ಲಿನ ಪರಸ್ಪರ ಸಹಕಾರ; ಗಯೋವನಿಯ ಮಗನಿಗೆ ಸುಂದರರೂಪಿ ಅರ್ನೆಸ್ಟನಲ್ಲಿ ಅಸೂಯೆ; ನೆರಮನೆಯ ತಬ್ಬಲಿಯನ್ನು ಕಂಡು ಕನಿಕರಿಸುವ ಲಿಸ್ಸಾ ತಾಯಿಯ ಕರುಣೆ : ನನ್ನಿಟ್ಟೆಯ ಅನುಕಂಪ; ಕಟುಕನ ಒರಟುತನ ಹಣಗಾರ ಗಯೋವನಿಯ ದರ್ಪ; ನಿನ್ನಿ ನಾಯಿಯ ಸ್ವಾಮಿಭಕ್ತಿ; ಕಷ್ಟದ ಪರಾಕಾಷ್ಠೆಯಲ್ಲಿರುವಾಗ, ಮಿಂಚಿನಂತೆ ಒದಗುವ ದೈವ ಸಹಾಯ; ತೋಟದಲ್ಲಿ ಕೆಲಸ, ಮೊದಲ ನೋಟದಲ್ಲಿ ಪ್ರೇಮ; ಸುಂದರ ಪುರುಷನೊಡನೆ ಪತ್ನಿಯು ಸಲಿಗೆಯಿಂದ ನಡೆದುಕೊಂಡಾಗ ಉಂಟಾಗುವ ಸಂಶಯ; ದಾಂಪತ್ಯ ಜೀವನದಲ್ಲಿ ವೈಮನಸ್ಯ; ಕಲಹ–ನಷ್ಟ-ಸೋಲುಗಳಿಂದ ಉಂಟಾಗುವ ಅವಿಚಾರ ಕೋಪ; ಸೇಡಿಗೆ ಸೇಡು ತೀರಿಸಬೇಕೆಂಬ ಮನೋಭಾವ; ಶೀರ ಸೋತು, ಬಾಳೇ ಬೇಸರವಾದಾಗ ಎಲ್ಲಕ್ಕೂ ಸಿದ್ಧನಾಗಿ ಸೈತಾನನಿಗೂ ಶರಣಾಗಲು ಮುಂದೆ ಬರುವ, ಕುಸಿದು ಬೀಳುವ ಆರ್ತಭಾವ; ಜನ ಸಮೂಹದ ದೈವಭಕ್ತಿ, ಕಲೋಪಾಸನೆ; ತಾಳ್ಮೆ-ಸಹಕಾರ; ಇವುಗಳೆಲ್ಲ ನಿತ್ಯ ಜೀವನದಲ್ಲಿ ಕಂಡುಬರುವ ರಸ–ವಿರಸ ವಿಶೇಷಗಳೇ ಸರಿ. ಇವೆಲ್ಲ ಸಮಯ ಸಮಯಗಳಲ್ಲಿ ಬಹು ವ್ಯಂಜಕವಾಗಿ ವರ್ಣಿಸಲ್ಪಟ್ಟಿವೆ.

ಈ ಕಾದಂಬರಿಯನ್ನು ಓದಿದ ಮೇಲೆ ಈ ಒಂದು ಪ್ರಶ್ನೆ ಎಲ್ಲರ ಮುಂದೆ ಬಂದು ನಿಲ್ಲುವುದು, ಶತಶಃ ಸತ್ಯ. ಅರ್ನೆಸ್ಟ್ ಏನೂ ತಿಳಿಯದ ಮುಗ್ಧ ಬಾಲಕ. ಅವನಿಗೆ ಬಡವರಲ್ಲಿ ಸಹಾನುಭೂತಿ, ಹಿರಿಯರಲ್ಲಿ ಗೌರವ–ಮರ್ಯಾದೆ; ದೇವರಲ್ಲಿ ಭಕ್ತಿ; ಸಾಕಷ್ಟು ಬುದ್ಧಿ; ವಿದ್ಯಾಭ್ಯಾಸದಲ್ಲಿ ಆಸಕ್ತಿ ಇದೆ. ಮೇಲಾಗಿ ಮುಖದಲ್ಲಿ ದೈವೀ

ಕಳೆ; ಬಾಲಕ ಏಸುವಿಗೆ ರೂಪದರ್ಶಿಯಾಗಿ ನಿಲ್ಲಬಲ್ಲ ಸೌಮ್ಯಸೊಗಸು. ಇಂಥವನು ದೈವದ್ರೋಹಿ, ಕ್ರೂರಿ. 'ಪಶು'ಆಗಿ, 'ಜುದಾಸ'ನಿಗೆ ಪ್ರತಿರೂಪವಾಗಿ ನಿಲ್ಲುವಂಥ ಹೀನಸ್ಥಿತಿಗೆ ಬರಲು ಕಾರಣ? 'ದೈವ' ಅಥವಾ 'ಸಮಾಜ' ಎಂದು ಸುಲಭವಾಗಿ ಹೇಳಿಬಿಡುವುದರಲ್ಲಿ ವಿಚಾರವಮಾಡಿದಂತೆ ಕಾಣಿಸುವುದಿಲ್ಲ. ಅವನಿಗೆ ದೈವ ಸಹಾಯ, ಸಮಾಜದ ಸಹಾನುಭೂತಿ ಇದ್ದೇ ಇತ್ತು. ಆದರೂ....! ಸಮಾಜ ಅರ್ನೆಸ್ಟೋನನ್ನು ದೂರಮಾಡಲಿಲ್ಲ. ಹೊಟ್ಟೆಯೊಳಗಿಟ್ಟು ಕಾಪಾಡಲು ನನ್ನೆಟ್ಟ, ಲಿಸ್ಸಾ ಮುಂದೆ ಬರಲಿಲ್ಲವೆ? ಲಿಸ್ಸಾಳ ಅಣ್ಣ, ತೋಟದ ಮಾಲೀಕ ಆಶ್ರಯ ಕೊಡಲಿಲ್ಲವೆ? ನಾಯಿ ನಿಸ್ಸಿ ಸಮಾಧಾನ ನೀಡಲಿಲ್ಲವೆ? ಮೂವರು ತೋಟಗಾರ-ಸ್ನೇಹಿತರು ಜೊತೆಗೊಳ್ಳಲಿಲ್ಲವೆ? ಎರಡನೆಯ ಬಾರಿ ತೋಟದ ಯಜಮಾನ ಸಲಹೆಗಾರನನ್ನಾಗಿ ತೆಗೆದುಕೊಂಡು ಸತ್ಕರಿಸಲಿಲ್ಲವೆ? ಯಾವೋನೋ ಪ್ರೇಮಿಸಲಿಲ್ಲವೆ? ಅವಳ ತಂದೆ ತಾಯಿಗಳು ಆದರಿಸಲಿಲ್ಲವೆ? ದೈವ ಇಷ್ಟೆಲ್ಲ ಅನುಕೂಲ ಕೊಟ್ಟಿತು. ಕೆಲವು ಅನಾನುಕೂಲಗಳನ್ನೂ ಕೊಟ್ಟಿರಬಹುದು-ಗಯೋವನಿಯ ಕಾಟ, ಪೋಲೀಸರ ದೌರ್ಜನ್ಯ, ಟಾಯಿಟ್ಟನ ಕೋಪದ ವೆಟ್ಟು - ಎಲ್ಲ ನೋವುಂಟುಮಾಡಿರಬಹುದು. ಈ ಪ್ರಪಂಚದಲ್ಲಿ ಎಲ್ಲಿಯೂ ಸುಖ ಮಾತ್ರ ಇಲ್ಲ; ದುಃಖ ಮಾತ್ರವೂ ಇಲ್ಲ. ಮೈಕಲನು ಹೊರ ನೋಟಕ್ಕೆ ಸುಖಿಯಾಗಿ ಕಾಣಬಹುದು. ಅವನು ಕಲೋಪಾಸಕ; ಹೆಂಡಿರು ಮಕ್ಕಳ ತಾಪತ್ರಯವಿಲ್ಲ; 'ಉದರಂಭರಣ'ಕ್ಕೆ ಅನ್ಯರ ಮುಂದೆ ಕೈ ಚಾಚಬೇಕಿಲ್ಲ; ಹೆಚ್ಚಿನ ಸಂಪಾದನೆ, ತಾಳ್ಮೆ ಇದೆ. ಆದರೂ ನಿಜವಾಗಿ ಆತನಿಗಿರುವ ಚಿಂತೆ, ದುಃಖ ಬೇರಾರಿಗೂ ಇಲ್ಲ. ಪ್ರಾರಂಭದಲ್ಲಿಯೇ ರೂಪದರ್ಶಿಗಾಗಿ ಅಲೆದಾಟ; ಸ್ನೇಹಿತ ಬೆನೆಟ್ಟೋವಿನ ಮರಣದಿಂದ ಅನಾಥರಾದ ಅವನ ಮಕ್ಕಳ ಯೋಗಕ್ಷೇಮದ ಚಿಂತೆ; ಪೋಪರ ಮಾತಿಗೆ ಕಟ್ಟುಬಿದ್ದು, ಸ್ವಾತಂತ್ರ್ಯ ಹೆಚ್ಚಿಲ್ಲದ ಕಾರ್ಯದಲ್ಲಿ ಕೂಡಬೇಕಾಗಿ ಬಂದದ್ದು; ಪುನಃ ಜುದಾಸನಿಗಾಗಿ ಹುಡುಕಬೇಕಾಗಿ ಬಂದದ್ದು; ಮುದುಕನಾದರೂ ವಿಶ್ರಾಂತಿಯಿಲ್ಲ; ಲೀನಳ ಸಂಸಾರ ಸುಖಮಯವಾಗಲಿಲ್ಲ ಎಂಬ ಕೊರತೆ; ಜುದಾಸನಿಗಾಗಿ ಕತ್ತೆಯ ಮೂತ್ರದ ಮಡುವಿನಲ್ಲಿ, ದುರ್ಗಂಧದಲ್ಲಿ ರಾತ್ರಿವಾಸ; ಕೊನೆಯಲ್ಲಿ ಸಹ 'ಅರ್ನೆಸ್ಟೋವಿನ ಸರ್ವನಾಶಕ್ಕೆ ಕಾರಣನಾದೆನಲ್ಲ' ಎಂಬ ಮೂಕವೇದನೆ ಇವೆಲ್ಲ ಸಾಲದೆ ಒಬ್ಬನ ಮನಸ್ಸನ್ನು ಬೇಸರದ ಪ್ರಪಾತಕ್ಕೆ ತಳ್ಳುವುದಕ್ಕೆ! "ಅರ್ನೆಸ್ಟ್ ಎದುರಿಸದೆ ಸೋತ, ಮೈಕಲ್ ಎದುರಿಸಿ ಗೆದ್ದ." ಯಾರ ವ್ಯಕ್ತಿ-ಜೀವನವನ್ನು ತೆಗೆದುಕೊಂಡರೂ ಅಲ್ಲಿ ಸುಖ ದುಃಖಗಳ ಮೇಳವನ್ನೇ ಕಾಣುತ್ತೇವೆ. ದೈವದಲ್ಲಿ ಭಕ್ತಿ, ಮನೋದಾರ್ಢ್ಯಗಳನ್ನು ಹೊಂದಿ ಅವನ್ನು ಸಮದೃಷ್ಟಿಯಿಂದ ನೋಡುತ್ತಾ ಬಾಳುವವನು ಮೈಕಲನಂತೆ ಬಾಲಬಲ್ಲ; ಆ ಕಷ್ಟ-ಸುಖಗಳ ಪರೀಕ್ಷೆಗೆ ನಿಲ್ಲಲಾರದೆ, ತಡವರಿಸುವವನು ಜನ್ಮತಃ ಅರ್ನೆಸ್ಟ್ ಆದರೂ, ಬೇಕಾದಷ್ಟು ಅನುಕೂಲತೆಗಳಿದ್ದರೂ, ಸೋತು ಸೈತಾನನಿಗೆ ಶರಣಾಗಿ, 'ಗರಿಬಾಲ್ಡಿ' ಆಗಿ ನಿಂದಿತ ಜೀವನ ಸಾಗಿಸಬೇಕಾಗುತ್ತದೆ. ಈ ನಿತ್ಯ ಸತ್ಯವನ್ನು ಸಾರುವುದೇ "ರೂಪದರ್ಶಿ"ಯ ಮುಖ್ಯ ಉದ್ದೇಶ ಎಂದು ಹೇಳಬಹುದು. ಮನೋದಾರ್ಢ್ಯ ಇದ್ದಿದ್ದರೆ, ಅರ್ನೆಸ್ಟೊ ಲಿಸ್ಸಾ ಬಳಿಯಾಗಲಿ, ಲಿಸ್ಸಾ ಅಣ್ಣನ ಬಳಿಯಲ್ಲಾಗಲಿ ಇರಬಹುದಾಗಿತ್ತು ಅಥವಾ ಕುರೂಪಿಯಾದ ಮೇಲೂ ಯುವೋನೋಳೊಡನೆ ಪ್ರೇಮಮಯ ಜೀವನವನ್ನು ಸಾಗಿಸಬಹುದಾಗಿತ್ತು. ಯುವೋನೋಳ ಪ್ರೇಮ ಆದರ್ಶ ಪ್ರೇಮ; ಕೇವಲ ರೂಪಿಗೆ ಮರುಳಾದದ್ದಲ್ಲ, ಅವಳ ಚಿತ್ತ. ಕ್ಷುದ್ರಗಳಿಗೆಯಲ್ಲಿ ನೊಂದ ಮನಸ್ಸನ್ನು ಸಮಾಧಾನಗೊಳಿಸಲಾರದೆ, (ಅದಕ್ಕೆ ಅವನು ಪ್ರಯತ್ನಪಟ್ಟಿದ್ದಂತೂ ಸತ್ಯ-ಪೂರ್ಣವಾಗಿ ಸೋತ (ಪು. 292) ತನ್ನನ್ನು ಸೈತಾನನಿಗೆ ಒಪ್ಪಿಸಿಕೊಂಡ; ಅದೇನು ಅಸಹಜವಲ್ಲ-ಸಹಜವೇ. ಅವನ ಪ್ರಯತ್ನಕ್ಕೆ ಫಲ ಇಲ್ಲದೆ ಹೋಗಲಿಲ್ಲ "ನಹಿ ಕಲ್ಯಾಣಕೃತ್‌ಕಶ್ಚಿತ್ ದುರ್ಗತಿಂತಾತಗಚ್ಛತಿ" (ಭಗವದ್ಗೀತೆ) ಎಂಬಂತೆ, ಕೊನೆಗೆ ಅವನಿಗೆ ಸದ್ಗತಿಯೇ! ಮತ್ತೊಬ್ಬನಿಗೆ ನೋವಾಗದಿರಲೆಂದು, ಎಲ್ಲಾ ನೋವನ್ನು ತಾನೇ ಹೊರಲು ಸಿದ್ಧನಾದ, ಆ ಕಲ್ಯಾಣ ಕಾರ್ಯ ಒಳ್ಳೆಯ ಫಲವನ್ನೇ ಕೊಡುತ್ತದೆ. ಸುಳ್ಳು-ಮೋಸ-ದರ್ಪಗಳ ತೌರಿನಂತಿದ್ದ ಗಯೋವನಿ ಸುಖದಲ್ಲಿಯೇ ಕಾಲಕಳೆದ; ಕೊನೆಗೆ ಏನಾಯಿತು? ಕವಿ ಅದನ್ನು ಓದುಗರ ಕಲ್ಪನೆಗೆ ಬಿಟ್ಟಿದ್ದಾನೆ. ಗಯ್ಯಾಳಿ ಹೆಂಡತಿ, ಕೋಪಿ-ಕುರೂಪಿ-ಮಗ-ಇವರ ನಡುವೆ ಅವನ ಅಂತ್ಯಗಾಲ ಎಂದಿಗೂ ಸುಖಮಯವಾಗಿರಲಿಕ್ಕಿಲ್ಲ. ಅರ್ನೆಸ್ಟ್ ತನ್ನ ಜೀವಿತ ಕಾಲದಲ್ಲಿ ಅನೇಕ ಕಷ್ಟಗಳಿಗೆ ಈಡಾಗಿರಬಹುದು. ಆದರೆ ಗಂಬಾಲ್ಡಿಯಾಗಿ ಪುನಃ ಅರ್ನೆಸ್ಟೋ ಆದ. ತನ್ನ ತಪ್ಪನ್ನು ಅರಿತು ಪೂರ್ಣ ಪಶ್ಚಾತ್ತಾಪ

ಪಟ್ಟ—"ಚಿಕ್ಕಪ್ಪಾ! ಗಂಬಾಲ್ಡಿಯಾಗಿ ಜೀವಿಸಿರಲು, ಇನ್ನು ನನ್ನಿಂದಾಗದು" ಎಂದು ನೊಂದು ನುಡಿದ. ಪುನಃ ಅರ್ನೆಸ್ಟೋ ಆದ. ಪಶ್ಚಾತ್ತಾಪಕ್ಕಿಂತ ಪ್ರಾಯಶ್ಚಿತ್ತವಿಲ್ಲ ಪವಿತ್ರ ದೇವಾಲಯದ, ಪವಿತ್ರ ಕ್ಷೇತ್ರದಲ್ಲಿ ಮುಕ್ತನಾದ.

**ಕರ್ತೃ–ಭಾಷೆ–ಶೈಲಿ.**

ಕವಿಯು ಬೆಳೆದ ಸನ್ನಿವೇಶ, ಕಾಲ, ಅನುಸರಿಸುವ ಪಂಥ, ಉದ್ಯಮಗಳು ಕಾವ್ಯದ ಮೇಲೆ ಸಾಕಷ್ಟು ಪ್ರಭಾವವನ್ನು ಬೀರುತ್ತವೆ. ಆದ್ದರಿಂದ ಕಾವ್ಯದ–ಗ್ರಂಥದ ಪರಿಚಯದ ಜೊತೆಗೆ ಕವಿಯ ಲಘುಪರಿಚಯವನ್ನು ತಿಳಿದಿರುವುದು ಸಂಗತವೇ. ಶ್ರೀ ಕೆ. ವೆಂಕಟೇಶ ಐಯ್ಯರ್ ಅವರು ಕೆ. ವಿ. ಎಂದೇ ಪರಿಚಿತರು. ಉದ್ಯಮದಿಂದ ಅವರು ವ್ಯಾಯಾಮ ಶಿಕ್ಷಕರು. ಕವಿ ಮುದ್ದಣನೊಡನೆ ಶ್ರೀ ಅಯ್ಯರ್ ಅವರನ್ನು ಹೋಲಿಸಬಹುದು ಕನ್ನಡ ಸಾಹಿತ್ಯದಲ್ಲಿ ಇಬ್ಬರೂ ವಿಶಿಷ್ಟ ಸ್ಥಾನವನ್ನು ಪಡೆದವರು. ಮೇಲಾಗಿ ಬಡತನದ ಮೂಸೆಯಲ್ಲಿ ಬೆಂದು, ಅನುಭವ ಪಡೆದವರು. ಒಮ್ಮೆ ದಿ|| ಕೈಲಾಸಂ ಅವರು ಜೊತೆಯಲ್ಲಿ ಊಟಮಾಡುತ್ತಾ "I think you eat very much less" ಅಂದರಂತೆ, ಅದಕ್ಕೆ ಐಯ್ಯರ್ ಅವರು "Cannot afford it" ಎಂದರಂತೆ. ಮುದ್ದಣನದು ನಡುಗನ್ನಡದ ಕ್ಷೇತ್ರವಾದರೆ ಐಯ್ಯರ್ ಅವರದು ಹೊಸಗನ್ನಡ ಕ್ಷೇತ್ರ.

11-1-1898ರಂದು ಜನಿಸಿದ ಅವರ ಸ್ಥಳ ಕೋಲಾರ. ಆದರೂ ನೆಲಸಿರುವುದು ಬೆಂಗಳೂರಿನಲ್ಲಿ. ಕನ್ನಡ–ತಮಿಳು–ಇಂಗ್ಲಿಷ್ ಭಾಷೆಗಳನ್ನು ಚೆನ್ನಾಗಿ ಬಲ್ಲ ಇವರು ದಿ| ಶ್ರೀ ಟಿ. ಪಿ. ಕೈಲಾಸಂ ಅವರ ಪ್ರೇರಣೆ ಇಂದ ಸಾಹಿತ್ಯಕ್ಷೇತ್ರವನ್ನು ಪ್ರವೇಶಿಸಿದರೆಂದು ಹೇಳಬಹುದು. ಅವರನ್ನೇ ಗುರುವಾಗಿ ಆರಿಸಿದ ಶ್ರೀ ಕೆ. ವಿ. ಅವರಿಗೆ ಶ್ರೀ ಜಿ. ಪಿ. ರಾಜರತ್ನಂ ಮುಂತಾದವರ ಸತ್ಸಂಗ ಅವರ ಒಳಪ್ರತಿಭೆಯನ್ನು ಹೊರತರಲು ಸಹಾಯಕವಾಯಿತು. ದೇಹದಾರ್ಢ್ಯತೆ ಇದ್ದು, ಮಾನಸಿಕ ಸಮತೋಲನವನ್ನು ಹೊಂದಿದ್ದು, ಪ್ರತಿನಿತ್ಯ ಉತ್ತಮ ಸಾಹಿತ್ಯದ ವ್ಯಾಸಂಗವನ್ನು ಸಾಧಿಸಿ, ಖ್ಯಾತ ಸಾಹಿತ್ಯೋಪಾಸಕರ ಸಂಸರ್ಗದಲ್ಲಿ ಬೆಳೆದು ಕಲೆಯಲ್ಲಿ ಅಭಿರುಚಿಯನ್ನು ಬೆಳೆಸಿಕೊಂಡು ಬಂದಿರುವುದರ ಜೊತೆಗೆ ದೈವದತ್ತವಾಗಿ ಕಲ್ಪನಾಶಕ್ತಿಯೂ ಒಲಿದು ಬಂದಿರುವ ಪುಣ್ಯಾತ್ಮ ಶ್ರೀ ಕೆ. ವಿ. ಐಯ್ಯರ್ ಅವರು.

ಪುಸ್ತಕ ರೂಪದಲ್ಲಿ ಪ್ರಕಟವಾಗಿರುವ ಶ್ರೀ ಕೆ. ವಿ. ಅವರ ಕನ್ನಡಗ್ರಂಥಗಳು ಇವು. ರೂಪದರ್ಶಿ, ಶಾಂತಲಾ, (ಕಾದಂಬರಿಗಳು) ದೆಯ್ಯದಮನೆ (ನೀಳ್ಗತೆ) ಶ್ರೀ ಕೈಲಾಸಂ ಅವರ ಸ್ಮರಣೆ (ಜೀವನ ಪ್ರಸಂಗ)

ರೂಪದರ್ಶಿಯಲ್ಲಿ ಕಾಣಬರುವ ಭಾಷಾ ಶೈಲಿ ಮಾಗುತ್ತಾ ಬಂದು, ಶಾಂತಲಾದಲ್ಲಿ ಪೂರ್ಣವಾಗಿ ಮಾಗಿದೆ ಎಂದು ಹೇಳಬಹುದು. ಕೆಲವೊಮ್ಮೆ ಸುಲಭ ಗ್ರಾಹ್ಯವಲ್ಲದ ವಿಚ್ಛತ್ತಿ, ಬಾಟಿ, ತೃಪ್ತಕಂಠೆ, ಸೊಡೆಗರೆ ನೊದಲಾದ ಪದಗಳ ಪ್ರಯೋಗ ಕಂಡು ಬಂದರೂ, ಭಾಷೆಯ ಓಟ ಭಾವನೆಯ ಓಟಕ್ಕೆ ತಡೆಯಾಗಿಲ್ಲ. ಕೆಲವು ಸಂಭಾಷಣೆಗಳು ಸಂಭಾಷಣೆಯ ಹಿಡಿತವನ್ನು ಮೀರಿ ಭಾಷಣಗಳಂತೆ ತೋರುತ್ತವೆ (101–104ರಲ್ಲಿ ಲೀನಳ ಮಾತು). ಯುವೋನೋಳ ಪ್ರಲಾಪವನ್ನು 'ಸ್ಮರಣಕಥನ' ವನ್ನಾಗಿ ಹೇಳಿಸಿರುವುದು. ರೂಢಿಯಲ್ಲಿರುವ 'ಏಕಮೇವಾದ್ವಿತೀಯಂ' ಎಂಬುದನ್ನು 'ಏಕಮೇವನದ್ವಿತೀಯಂ' ಎಂದಿರುವುದೂ ಅಷ್ಟೇನೂ ಹಿತವಾಗಿಲ್ಲ. ಹೀಗೇಯೇ ಪುಸ್ತಕದ ತುಂಬ ಇರುವ ಒಳ್ಳೆಯ ಮಾತುಗಳನ್ನೆಲ್ಲಾ ಆರಿಸಿ ಬರೆಯಬೇಕಾಗಿಲ್ಲ – ಅದು ಸಾಧ್ಯವೂ ಇಲ್ಲ. ಉದಾಹರಣೆಗೆ ಈ ವಾಕ್ಯದ ಸೊಗಸು ನೋಡಿ. ಹುಟ್ಟೇ ದುಃಖ, ಬದುಕೇ ದುಃಖ, ಸಾವೇ ದುಃಖ.

ರೂಪದರ್ಶಿಯಲ್ಲಿ ಕತೆಯ ಓಟ ನಿಧಾನವಾದರೂ ಭಾಷೆಯ–ಶೈಲಿಯ ಓಟ ಹದತಪ್ಪಿಲ್ಲ. ಲೇಖಕರು, ಗಿಯೋವನಿ ದಂಪತಿಗಳ, ಲೀನಾ–ಟಾಯಿಟ್ಟರ ಯುವೋನೋಳ ಮುಂದಿನ ಜೀವನವನ್ನು ತಿಳಿಸಿಲ್ಲ. ಸೂಕ್ಷ್ಮವಾಗಿಯಾದರೂ ಅದರ ಕೊನೆಯನ್ನು ಸೂಚಿಸಿದ್ದರೆ ಚೆನ್ನಾಗಿತ್ತು ಎನಿಸುತ್ತದೆ.

Readers Digestನ ಒಂದು ಪುಟದ ಕಥಾ. ಬೀಜ ಶ್ರೀ ಕೆ. ವಿ. ಅವರ ಉತ್ಕೃಷ್ಟವಾದ ಕಲ್ಪನಾ ಕ್ಷೇತ್ರದಲ್ಲಿ ಸೇರಿ, ಲೋಕಾನುಭವದ ಮಳೆಯಿಂದ ಬೆಳೆದು, ರೂಪದರ್ಶಿಯ ಆಕಾರದ ಮಹಾ "ಅಶ್ವತ್ಥ ವೃಕ್ಷ"ವಾಗಿ ಬೆಳೆದಿವೆ. ವೃಕ್ಷದ ಕೆಲವು ಕೊಂಬೆಗಳು ದೀರ್ಘವಾಗಿ ಬೆಳೆದಿರಬಹುದು, ಡೊಂಕಾಗಿರಬಹುದು. ಆದರೆ ಅದು ಕೊಡುವ ನೆರಳು ಮಾತ್ರ ಬಿಸಿಲಿನಿಂದ ಬಳಲಿದ ದೇಹಕ್ಕೆ ಅಪ್ಯಾಯಮಾನವಾಗಿರುತ್ತದೆ ಹಾಗೆಯೇ ಅಲ್ಲೊಮ್ಮೆ ಇಲ್ಲೊಮ್ಮೆ ಅನಾವಶ್ಯಕವಾಗಿ ಬೆಳೆದಂತೆ ಕಂಡರೂ ರೂಪದರ್ಶಿಯು ಬೇಸರದಿಂದ ಕಂಗೆಟ್ಟ ಮನಸ್ಸಿಗೆ ಅಪ್ಯಾಯಮಾನವಾಗುವುದರಲ್ಲಿ ಏನೂ ಸಂದೇಹವಿಲ್ಲ. ಇಂಥಾ ಕೃತಿಯನ್ನು ಕೊಟ್ಟ ಶ್ರೀ ಅಯ್ಯರ್ ಅವರು ಅಭಿನಂದನಾರ್ಹರು

—ನಾ. ಮು. ಗಂ.



(58ನೇ ಪುಟದಿಂದ)

ತಜ್ಞರ ಮತ್ತು ಆಡಳಿತಗಾರರ ಒಂದು ಮಂಡಲಿಯನ್ನು ರಚಿಸಿ ಇದರ ಸರ್ವಮುಖವಾದ ವಿಚಾರಣೆ ನಡೆಯಲು ಅವಕಾಶಮಾಡಿಕೊಡಬೇಕು.' ಭಾಷೆಯಿಂದ ಭಾವೈಕ್ಯತೆಯನ್ನು ಸಾಧಿಸುವುದು ಎಷ್ಟು ಸಾಧ್ಯ ಮತ್ತು ತ್ರಿಭಾಷಾ ಸೂತ್ರವಾದರೂ, ಈ ಉದ್ದೇಶದಿಂದಲೇ ರೂಪಿತವಾಗಿರುವುದರಿಂದ ಎಷ್ಟು ದೂರದವರೆಗೆ ಅನುಸರಿಸಲು ತಕ್ಕದ್ದಾಗಿದೆಯೆಂದು ಈ ಮಂಡಲಿಯು ತೀರ್ಮಾನಿಸಲಿ. ಪ್ರಾಂತ್ಯ ಭಾಷೆಯೊಡನೆ ಸಂಸ್ಕೃತ ಭಾಷಾ ಬೋಧನೆಯನ್ನು ಲಾಭದಾಯಕವಾಮುದರಿಂದ ಜೋಡಿಸಬಹುದೆ? ವಿದ್ಯಾರ್ಥಿಯ ಹೊರೆಯನ್ನು ಹೆಚ್ಚಿಸದಂತೆ ಸಂಸ್ಕೃತಕ್ಕೆ ಹೇಗೆ ಪ್ರೋತ್ಸಾಹ ಕೊಡಬಹುದು? ನಾನೀ ವಿಷಯದಲ್ಲಿ ಹೆಚ್ಚು ಶ್ರಮವಹಿಸುವುದಿಲ್ಲ. ಕಾನೂನಿನ ಪುಸ್ತಕಕ್ಕೆ ಯಾವುದೇ ಭಾಷಾ ಸೂತ್ರವು ಬರುವ ಮೊದಲೇ ನನ್ನ ಅಥವಾ ಇಂತಹ ವಿಚಾರ ಸರಣಿಗೆ ಅವಕಾಶವಿತ್ತು ತೀರ್ಮಾನ ಕೈಗೊಳ್ಳಬಹುದೆಂದು ನಂಬುತ್ತೇನೆ

ನನ್ನ ಅಭಿಪ್ರಾಯದ ಬಗೆಗೆ ನಾನು ಈ ಮೊದಲು ತಿಳಿಸಿದ್ದನ್ನೇ ಮತ್ತೊಮ್ಮೆ ಜ್ಞಾಪಿಸಬಯಸುತ್ತೇನೆ. ಸಂಸ್ಕೃತದ ಸ್ಥಾನಕ್ಕೆ ಬರಲು ತಕ್ಕ ಬೇರಾವ ಭಾಷೆಯೂ ಭಾರತದಲ್ಲಿಲ್ಲ. ನಮ್ಮ ಅಂತರಂಗದ ಜೀವನದ ಚಿರಪರಿಚಿತ ಅತಿ ಸಮೀಪ ಸಂಬಂಧವುಳ್ಳ ಅನ್ಯಭಾಷೆ ಭಾರತದಲ್ಲಿಲ್ಲ. ನಮಗೆ ಬೇಕೆನಿಸುವವರೆಗೆ ಇಂಗ್ಲೀಷ್ ಭಾಷೆಯ ಹೆಣಭಾರವನ್ನು ಹೊರುತ್ತಿರಬಹುದು ಆದರೆ ಅದೆಂದೂ ಭಾರತೀಯ ಭಾಷೆಯಾಗಲೀ ಆಗಿಲ್ಲ, ಆಗಲಾರದು. ಅದಕ್ಕೆ ನಮ್ಮ ನೆಲದಲ್ಲಿ ಬೇರುಗಳಿಲ್ಲ. ಹಿಂದೀ ಭಾಷೆಯೂ ಸಹ ಅತ್ಯಧಿಕ ಜನರಾಡುವ ಭಾಷೆಯೇ ಆದರೂ ಹೆಚ್ಚೆಂದರೆ ಒಂದು ಪ್ರಾಂತ್ಯ ಭಾಷೆ ಮಾತ್ರವಾದೀತು. ಆ ಪ್ರಾಂತ್ಯ ಇತರ ಭಾಷಾ ಪ್ರಾಂತ್ಯಗಳಿಗಿಂತ ದೊಡ್ಡದಾಗಿರಬಹುದಷ್ಟೆ. ಇಡೀ ದೇಶದಲ್ಲಿ ಜನಜೀವನದಲ್ಲಿ ಹಾಸು ಹೊಕ್ಕಾದುದೆಂದರೆ ಸಂಸ್ಕೃತ ಭಾಷೆ ಮಾತ್ರವೇ. ಅದನ್ನು ಕುಟುಂಬಗಳ ಮಂಡಲಿಯಲ್ಲಿ ಕೇಳುತ್ತೇವೆ, ಅಂಗಡಿಗಳ ಪೇಟೆ ಬೀದಿಯಲ್ಲಿ ಕೇಳಬಹುದು, ದೇವಾಲಯದಲ್ಲಿಯಂತೂ ಕೇಳಿಯೇ ಕೇಳುತ್ತೇವೆ. ಈ ಒಂದು ಮಹಿಮಾನ್ವಿತ ಪಿತ್ರಾರ್ಜಿತ ಸಂಪದದೊಡನೆ ಹುಡುಗಾಟ ಬೇಡ. ಇದನ್ನಂತೂ ಬೇರೊಂದರಿಂದ ಬದಲಿಸುವಂತಿಲ್ಲ. ಅದನ್ನೊಮ್ಮೆ ಕಳೆದುಕೊಂಡರಂತೂ ನಾವೂ ಭಾರತೀಯತ್ವವನ್ನೇ ಕಳೆದುಕೊಂಡಂತಾಗುತ್ತದೆ. ನಮ್ಮ ರಾಜಕೀಯ ಸ್ವಾತಂತ್ರವೂ ಸಹ ನಮಗಾಗಲೀ, ವಿಶಾಲ ವಿಶ್ವಕ್ಕಾಗಲೀ ಹೆಚ್ಚಿನ ಬೆಲೆಯುಳ್ಳದೆಂದು ಕಾಣಬರಲಾರದು.

—ಅನುವಾದ: "ರಾಜೀವ"

# ಸುದ್ದಿ ಸಂಗ್ರಹ



i] ದಿನಾಂಕ 26-6-1966 ರಂದು ಬೆಂಗಳೂರಿನ ಶ್ರೀ ಜಯದೇವ ಮುರುಘರಾಜೇಂದ್ರ ವಿದ್ಯಾರ್ಥಿ ನಿಲಯದ ಸಭಾಂಗಣದಲ್ಲಿ "ವೀರಶೈವ ವಿದ್ಯಾಭಿವೃದ್ಧಿ ನಿಧಿ-ಸಮಿತಿ" ಯ ವಿಶೇಷ ಸಭೆ ಸೇರಿಸ್ಸಿತು. ಸಭೆಯ ಅಧ್ಯಕ್ಷತೆಯನ್ನು ಶ್ರೀ ಸಿದ್ಧಗಂಗಾ ಮಠಾಧ್ಯಕ್ಷರಾದ ಶ್ರೀ ನಿ|| ಪ್ರ|| ಸ್ವ|| ಡಾ|| ಶ್ರೀ ಶಿವಕುಮಾರಸ್ವಾಮಿಗಳವರು ವಹಿಸಿದ್ದರು.

ಶ್ರೀಮತಿ ಶಕುಂತಲಾ ಪಾಂಡುರಂಗರಾಯರಿಂದ ಪ್ರಾರ್ಥನೆಯೂ, ಶ್ರೀ ಜಿ. ಮಲ್ಲಿಕಾರ್ಜುನಪ್ಪನವರಿಂದ ಸ್ವಾಗತಭಾಷಣವೂ ಆದಮೇಲೆ ಪದ್ಮಶ್ರೀ ಬಿ. ಶಿವಮೂರ್ತಿಶಾಸ್ತ್ರಿಗಳು ವೀ|| ವಿ|| ನಿಧಿಗೆ ಸು. 1½ ಲಕ್ಷ ರೂ ಆಸ್ತಿಯನ್ನು ದಾನಮಾಡಿದ ಶ್ರೀಮತಿ ಹೆಚ್‌ಎನ್. ಲಕ್ಷ್ಮೀದೇವಮ್ಮ ಹಾಗೂ ಅವರ ಪತಿ ದಿ|| ನಾಗಣ್ಣ- ಇವರ ಭಾವಚಿತ್ರ ಅನಾವರಣ ಮಾಡಿದರು.

ಶ್ರೀಶೈಲ ಸೂರ್ಯಸಿಂಹಾಸನಾಧೀಶ್ವರ ಶ್ರೀ "ಜ.ಚ.ನಿ."-ಅವರೂ, ಶ್ರೀಮತಿ ಜಯದೇವಿ ತಾಯಿ ಲಿಗಾಡೆಯವರೂ, ಶ್ರೀ ಜೀರಗೆಕಟ್ಟಿ ಬಸವಪ್ಪನವರೂ ದಾನಿಗಳ ಗುಣಗಾನ ಮಾಡಿದಮೇಲೆ, ಶ್ರೀಮತಿ ಲಕ್ಷ್ಮೀದೇವಮ್ಮನವರು ತಮಗೆ ಅರ್ಪಿಸಿದ ಸನ್ಮಾನ ಪತ್ರಕ್ಕೆ ಸೂಕ್ತ ಉತ್ತರ ನೀಡಿದರು.

ಅಧ್ಯಕ್ಷಪೀಠದಿಂದ ಪೂಜ್ಯ 'ಗುರುದೇವ' ರು 'ಈ ನಿಧಿಯಿಂದ ಪ್ರಯೋಜನ ಪಡೆದು ವಿದ್ಯಾವಂತರಾದ ಜನರು ತಾವು ಒಂದು ಕಾಯಕವನ್ನು ಕೈಗೊಂಡು ಉತ್ತಮ ಸ್ಥಿತಿಗೆ ಬಂದಾಗ, ಸಮಾಜಕ್ಕೋಸ್ಕರವಾಗಿ ನಾಡಿನ ಕಲ್ಯಾಣದ ಸಲುವಾಗಿ ಉದಾರವಾಗಿ ಸಹಾಯ ಮಾಡಬೇಕು. ಈ ದಿಸೆಯಲ್ಲಿ ಇಂದಿನ ದಾನಿಗಳ ಮಾರ್ಗದರ್ಶನವನ್ನು ಪಡೆದು, ನಿಷ್ಕಾಮಸೇವೆ ಸಲ್ಲಿಸಿ ತನ್ಮೂಲಕ ವಿಶ್ವಧರ್ಮವಾದ ವೀರಶೈವಧರ್ಮವನ್ನು ಉದ್ಧಾರವಮಾಡುವ ಸತ್ಸಂಕಲ್ಪ ಮಾಡಬೇಕು"-ಎಂದು ಕರೆಯಿತ್ತರು.

ಶ್ರೀ ಪುಟ್ಟಸ್ವಾಮಿಯವರಿಂದ ವಂದನಾರ್ಪಣೆಯಾದ ಬಳಿಕ, ರಾಷ್ಟ್ರಗೀತೆಯೊಂದಿಗೆ ಸಭೆಮುಕ್ತಾಯವಾಯಿತು.

●

ii] ದಿನಾಂಕ 10-7-1966 ರಂದು ಮೈಸೂರಿನ ಶ್ರೀ ಕಂಠಿಮಲ್ಲಣ್ಣನವರ ಕಲ್ಯಾಣ ಮಂದಿರದ ಸಭಾಂಗಣದಲ್ಲಿ ಶ್ರೀ ಮನ್ನಿಡುಮಾಮಿಡಿ ಶ್ರೀಶೈಲ ಸೂರ್ಯಸಿಂಹಾಸನಾಧೀಶ್ವರ ಜಗದ್ಗುರು ಶ್ರೀ ಶ್ರೀ ಚನ್ನಬಸವರಾಜದೇಶಿಕೇಂದ್ರ ಶಿವಾಚಾರ್ಯ ಮಹಾಸ್ವಾಮಿಗಳವರ ದಿವ್ಯ ಸನ್ನಿಧಿಯಲ್ಲಿ, ಮೈಸೂರು ವೀರಶೈವ ಸಜ್ಜನ ಸಂಘದವರು ವಿಶೇಷ ಉಪನ್ಯಾಸಗಳನ್ನು ಏರ್ಪಡಿಸಿದ್ದರು.

ಬೆಂಗಳೂರಿನ ಪಂಡಿತ ಕೆ. ಪಿ. ಶಿವಲಿಂಗಯ್ಯನವರು "ಶಿವಶರಣರ ವಿಚಾರಧಾರೆ" ಎಂಬ ವಿಷಯವಾಗಿಯೂ, ಶ್ರೀ ಹೆಚ್. ಗಂಗಾಧರನ್, ಎಂ.ಎ., ಬಿ.ಎಲ್. ಅವರು "ವೀರಶೈವ ದರ್ಶನ" ಎಂಬ ವಿಷಯವಾಗಿಯೂ ಉಪನ್ಯಾಸಮಾಡಿದರು.

ಆಸ್ಥಾನ ವಿದ್ವಾನ್ ಶ್ರೀ ಎಂ. ಜಿ. ನಂಜುಂಡಾರಾಧ್ಯರು ಸ್ವಾಗತಭಾಷಣಮಾಡುತ್ತ ಶ್ರೀಶೈಲ ಪೀಠದ ಇತಿಹಾಸವನ್ನೂ, ಉಪನ್ಯಾಸಕಾರರ ಕತೃತ್ವ ಶಕ್ತಿಯ ಬಗೆಗೂ ಪರಿಚಯಮಾಡಿಕೊಟ್ಟರು.

ಪೂಜ್ಯ ಜಗದ್ಗುರುಗವರ ಆಶೀರ್ವಾಚನ ಹಾಗೂ ಮಂಗಳದೊಂದಿಗೆ ಸಭೆಯು ಮುಕ್ತಾಯವಾಯಿತು.

●

iii] ದಿನಾಂಕ 16--7—1966 ರಂದು ಬೆಂಗಳೂರಿನ ಶ್ರೀ ಚಾಮರಾಜೇಂದ್ರ ಸಂಸ್ಕೃತ ಕಾಲೇಜಿನ ಸಭಾಂಗಣದಲ್ಲಿ ಪಿ. ಯು. ಸಿ. ಹಾಗು XI ನೆಯ ತರಗತಿಗಳ ಕನ್ನಡ ಅಧ್ಯಾಪಕರ ಸಭೆಯು ಸಮಾವೇಶಗೊಂಡಿದ್ದಿತು. ಅದೇ ಕಾಲೇಜಿನ ಪ್ರಿನ್ಸಿಪಾಲರಾದ ಶ್ರೀ ಶಂಕರಪ್ಪನವರು ಸಭೆಯ ಅಧ್ಯಕ್ಷತೆಯನ್ನು ವಹಿಸಿದ್ದರು. ।ವ್ಯವಸ್ಥಾಪಕರಾದ ಶ್ರೀ ಜಿ. ಬ್ರಹ್ಮಪ್ಪನವರು ಸ್ವಾಗತ ಭಾಷಣಮಾಡಿ, ಸಭೆಯ ಉದ್ದೇಶವನ್ನು ವಿವರಿಸಿ "ಕನ್ನಡ ಅಧ್ಯಾಪಕರ ಸಂಘ" ದ ಸ್ಥಾಪನೆಯ ಅಗತ್ಯವನ್ನು ಸ್ಪಷ್ಟಪಡಿಸಿದರು.

ಸರ್ವ ಶ್ರೀ ಹಂ. ಪ. ನಾಗರಾಜಯ್ಯ, ಎಂ. ಜಿ. ವೆಂಕಟೇಶಯ್ಯ, ಕೆ. ಪಿ. ಶಿವಲಿಂಗಯ್ಯ, ಹೆಚ್. ಎಂ. ಶಂಕರನಾರಾಯಣರಾವ್, ಜಿ. ವೆಂಕಟಸುಬ್ಬಯ್ಯ ಇವರು ಸಂಘಸ್ಥಾಪನಾಧ್ಯೇಯವನ್ನು ಸಮರ್ಥಿಸಿ ಮಾತನಾಡಿದರು.

ಪ್ರಸಕ್ತಸಾಲಿಗೆ ಸಂಘದ ಅಧ್ಯಕ್ಷರಾಗಿ ಶ್ರೀ ಜಿ. ವೆಂಕಟಸುಬ್ಬಯ್ಯನವರನ್ನೂ, ಕಾರ್ಯದರ್ಶಿಗಳಾಗಿ ಶ್ರೀ ಜಿ. ಬ್ರಹ್ಮಪ್ಪ ಮತ್ತು ಶ್ರೀ ಕೆ. ಪಿ. ಶಿವಲಿಂಗಯ್ಯನವರನ್ನೂ ಸರ್ವಾನುಮತದಿಂದ ಚುನಾಯಿಸಲಾಯಿತು.

ಅಧ್ಯಕ್ಷ ಭಾಷಣ, ವಂದನಾರ್ಪಣೆಗಳಾದ ಮೇಲೆ ಪಿ.ಯು.ಸಿ. ಕನ್ನಡ ಪಠ್ಯಪುಸ್ತಕಗಳನ್ನು ಉಚಿತವಾಗಿ ಅಧ್ಯಾಪಕರಿಗೆ ಹಂಚಲಾಯಿತು. ರಾಷ್ಟ್ರಗೀತೆಯೊಂದಿಗೆ ಸಭೆಯ ಕಾರ್ಯಕಲಾಪವು ಮುಗಿಯಿತು.



# 1-4-66 ರಿಂದ 30-6-66ರ ವರೆಗೆ

# ಶ್ರೀ ಶ್ರೀಗಳವರ ಕಾರ್ಯಕ್ರಮದ ವಿವರ



2—4—66 ಮಧುಗಿರಿ ಚನ್ನವರ ಗ್ರಾಮದಲ್ಲಿ ಶ್ರೀ ಆಂಜನೇಯಸ್ವಾಮಿ ರಥೋತ್ಸವದಮುಕ್ತಾಯ ಸಮಾರಂಭ ಭಾಷಣ.

11—4—66 ತುಮಕೂರು ಹೊಸಮಂಡಿಪೇಟೆ ಅಕ್ಕಮಹಾದೇವಿ ಸಮಾಜದಲ್ಲಿ ಧಾರ್ಮಿಕಉಪದೇಶ.

15—4—66 ರವೀಂದ್ರ ಕಲಾಕ್ಷೇತ್ರ ಬೆಂಗಳೂರಿನಲ್ಲಿ ಕನಕದಾಸ ಜಯಂತಿ, ಭಾಷಣ.

18—4—66 ಅರಸೀಕೆರೆ ತಾಲ್ಲೂಕು ಜವಗಲ್ ಹೋಬಳಿ ಕೋಳಗುಂದ ಗ್ರಾಮದ ಶ್ರೀ ಕೇದಿಗಿ ಮಠದಲ್ಲಿ ಭಾಷಣ.

— ಜಾಲಿಹಳಿ ಶ್ರೀ ಗಣಪತಿ ಸೇವಾಮಂಡಲಿಯ ಆಶ್ರಯದಲ್ಲಿ ಬಸವಜಯಂತಿ ಕಾರ್ಯಕ್ರಮದ ಪ್ರಾರಂಭೋತ್ಸವ ಭಾಷಣ.

24—4— … ಗ್ಗದ ಶ್ರೀ ಬಸವೇಶ್ವರ ದೇವಸ್ಥಾನದ ಕಮಿಟಿ ಆಶ್ರಯದಲ್ಲಿ ಕರ್ನಾಟಕ ಸಂಘದ ಭವನದಲ್ಲಿ ಬಸವಜಯಂತಿ ಪ್ರಾರಂಭೋತ್ಸವದ ಉದ್ಘಾಟನಾ ಭಾಷಣ.

25—4—66 ಕೃಷ್ಣರಾಜ ನಗರದ ತಾಲ್ಲೂಕು ಲಾಳನಹಳ್ಳಿ ಗ್ರಾಮದ ನಿಜಗನಹಳ್ಳಿ ಸಿದ್ದಯ್ಯನವರ ಮಗ ಲಿಂಗಪ್ಪನವರ ಗೃಹಪ್ರವೇಶ

26—4—66 ತುಮಕೂರು ಹೊಸ ಮಂಡಿಪೇಟೆಯಲ್ಲಿರುವ ಅಕ್ಕಮಹಾದೇವಿಯ ಮಹಿಳಾ ಸಮಾಜದ ಆವರಣದಲ್ಲಿ ಬಸವಜಯಂತಿ ಕಾರ್ಯಕ್ರಮದ ಭಾಷಣ.

27—4—66 ಚಿತ್ರದುರ್ಗದ ಕರ್ನಾಟಕ ಸಂಘದಲ್ಲಿ ಕನ್ನಡ ವಸಂತ ಸಾಹಿತ್ಯೋತ್ಸವದ ಸಮಾರೋಪ ಭಾಷಣ.

30—4—66 ಅಕ್ಕಿರಾಂಪುರದಲ್ಲಿ ಸೊಸೈಟಿ ಉಗ್ರಾಣದ ಪ್ರಾರಂಭೋತ್ಸವದಲ್ಲಿ ಭಾಷಣ.

2—5—66 ಹಳೇಗುಡ್ಡದಹಳ್ಳಿ ಗ್ರಾಮದ ಶ್ರೀ ಸತ್ಯಗಣಪತಿ ದೇವಾಲಯದ ಕಟ್ಟಡದ ಪ್ರಾರಂಭೋತ್ಸವ ಮತ್ತು ಶ್ರೀ ಗಣಪತಿ ಪ್ರತಿಷ್ಠಾಪನಾ ಮಹೋತ್ಸವ.

3—5—66 ನೆಲಮಂಗಲ ತಾಲ್ಲೂಕು ಕಂಬಾಳು ಗ್ರಾಮದಲ್ಲಿ ಬಸವಜಯಂತಿ ಕಾರ್ಯಕ್ರಮದಲ್ಲಿ ಭಾಷಣ.

14—5—66 ತುಮಕೂರು ತಾಲ್ಲೂಕು ಶೀತಕಲ್ಲಿನಲ್ಲಿ ಹಳೆಯ ವಿದ್ಯಾರ್ಥಿ ಸಂಘದ ಆಶ್ರಯದಲ್ಲಿ ಭಾಷಣ.

18—5—66 ನೆಲಮಂಗಲ ತಾಲ್ಲೂಕು ಹೊನ್ನರಾಯನ ಹಳ್ಳಿಯಲ್ಲಿ ವಿದ್ಯುದ್ದೀಪ ಪ್ರಾರಂಭೋತ್ಸವದಲ್ಲಿ ಭಾಷಣ.

27—5—66 ವಿಶ್ವಪರಿಷತ್ ಬೆಂಗಳೂರು.

29—5—66 ಶ್ರೀ ಕ್ಷೇತ್ರದಲ್ಲಿ ಶ್ರೀ ಟಿ. ಎನ್. ಕೆಂಪಹೊನ್ನಯ್ಯನವರು ಕಟ್ಟಿಸಿರುವ ಅತಿಥಿ ಗೃಹ ಪ್ರವೇಶ. ವಿಶಾಲ ಮೈಸೂರಿನ ಮುಖ್ಯಮಂತ್ರಿಗಳಾದ ಶ್ರೀ ಎಸ್. ನಿಜಲಿಂಗಪ್ಪನವರಿಂದ.

1—6—66 ಹಾಸನಜಿಲ್ಲೆ ಆಲೂರು ತಾಲ್ಲೂಕು ಬಳೇಕೊಪ್ಪಲು ಎಸ್ಟೇಟಿನಲ್ಲಿ ಶ್ರೀಗಳವರ ಅಧ್ಯಕ್ಷತೆಯಲ್ಲಿ ಶ್ರೀ ಬಿ. ಡಿ. ಜತ್ತಿಯವರಿಂದ ದೇವಾಲಯದ ಕಟ್ಟಡದ ಪ್ರಾರಂಭೋತ್ಸವ.

8—6—66 ಮಾಕಳಿಯಲ್ಲಿ ಪ್ರೌಢಶಾಲಾ ಪ್ರಾರಂಭೋತ್ಸವದ ಅಧ್ಯಕ್ಷತೆ.

10—6—66 ಬೆಳಿಗ್ಗೆ 8 ಘಂಟೆಗೆ ನೆಲಮಂಗಲ ಸೊಂಡೇಕೊಪ್ಪ ರಸ್ತೆಯಲ್ಲಿರುವ ವರಸಿದ್ಧಿವಿನಾಯಕ ದೇವಸ್ಥಾನದ ಬಳಿ ನವಗ್ರಹ ಪ್ರತಿಷ್ಠಾಪನ ಮಹೋತ್ಸವದಲ್ಲಿ ಭಾಷಣ.

17—6—66 ತುಮಕೂರು ಪುರಸಭೆ ಉಪಹಾರ ಮಂದಿರದ ಅಸ್ತಿಭಾರ ಶಿಲೆಯ ಪ್ರತಿಷ್ಠಾಪನ ಮಹೋತ್ಸವ.

26—6—66 ಬೆಂಗಳೂರಿನ ಶ್ರೀ ಜಯದೇವ ವಿದ್ಯಾರ್ಥಿನಿಲಯದಲ್ಲಿ ಕಾರ್ಯಕ್ರಮ ಮತ್ತು ತುಮಕೂರು ತಾಲ್ಲೂಕು ಹೆಬ್ಬೂರು ಪ್ರೌಢಶಾಲಾ ಕಟ್ಟಡದ ಪ್ರಾರಂಭೋತ್ಸವ.



# ಸಿದ್ಧಗಂಗಾ

## ತ್ರೈಮಾಸಿಕ ಚಂದಾ ವಿವರ

●

**ಬಿಡಿ ಪತ್ರಿಕೆ : ರೂ. ೧=೨೫**

| | | |
|---|---|---|
| ವಾರ್ಷಿಕ ಚಂದಾ ಸಂಸ್ಥೆಗಳಿಗೆ | 6-00 | ಅಂಚೆವೆಚ್ಚ ಸೇರಿ |
| ವಾರ್ಷಿಕ ಚಂದಾ ವ್ಯಕ್ತಿಗಳಿಗೆ | 5-00 | ” |
| ವಾರ್ಷಿಕ ಚಂದಾ ವಿದ್ಯಾರ್ಥಿಗಳಿಗೆ | 4-00 | ” |

ಚಂದಾ ಹಣವನ್ನು :

ಪ್ರಕಾಶಕರು :

**ಹಳೆಯ ವಿದ್ಯಾರ್ಥಿ ಸಂಘ**

**ಶ್ರೀ ಸಿದ್ಧಗಂಗಾ ಕ್ಷೇತ್ರ, ತುಮಕೂರು ಜಿಲ್ಲೆ**

ಇವರಿಗೆ ಕಳುಹಿಸಬೇಕು.

ಪ್ರಕಟನೆಗೆ ಲೇಖನಗಳನ್ನೂ, ವಿಮರ್ಶೆಗೆ ಗ್ರಂಥಗಳನ್ನೂ, ವಿನಿಮಯಕ್ಕೆ ಪತ್ರಿಕೆಗಳನ್ನೂ :

ಸಂಪಾದಕ :

**‘ ಸಿದ್ಧಗಂಗಾ ’** (ತ್ರೈಮಾಸಿಕ)

ಹಳೆಯ ವಿದ್ಯಾರ್ಥಿ ಸಂಘ,

**ಶ್ರೀ ಸಿದ್ಧಗಂಗಾ ಕ್ಷೇತ್ರ, ತುಮಕೂರು ಜಿಲ್ಲೆ**

ಇವರಿಗೆ ಕಳುಹಿಸಬೇಕು.

Printed by T. B. Dharanendraiah at Prithvi Printers, Balepet, Bangalore-2.